# ಕೋಗಿಲೆ
ಮತ್ತು
# ಸೋವಿಯಟ್ ರಷ್ಯಾ

ಕುವೆಂಪು

ಕೆ.ವಿ. ಪುಟ್ಟಪ್ಪ

೧೯೪೪

# ವಿವರ

ಪುಟ

# ಕೋಗಿಲೆ ಮತ್ತು ಸೋವಿಯಟ್ ರಷ್ಯಾ

ಸೋವಿಯಟ್ ರಷ್ಯಾಕ್ಕೆ ನಾನೊಮ್ಮೆ ಹೋಗಿದ್ದೆ,
ಮನಸಿನಲ್ಲಿ;
ಬಂದಿರಲು ಗಾಢನಿದ್ದೆ,
ಕನಸಿನಲ್ಲಿ!—

ಶ್ರೀಮಂತರಲ್ಲಿಲ್ಲ: ಶ್ರೀಮಂತರೇ ಎಲ್ಲ!
ಆಳ್ವರಸರಲ್ಲಿಲ್ಲ: ಅರಸರೇ ಆಳ್ಗಳೆಲ್ಲ!
ಹೆಚ್ಚು ಕಡಮೆಗಳಿಲ್ಲ; ಮೇಲು ಕೀಳುಗಳಿಲ್ಲ;
ಕೆಲಸವಿಲ್ಲದ ಅಲಸಗಾರನಿಗೆ ಅಲ್ಲಿ ಕೂಳಿಲ್ಲ;
ಕೆಲಸವೆಂದರೆ ಉಸಿರು! ಕೆಲಸವೇ ಬಾಳೆಲ್ಲ!
ಆಳು ತನಗಾಗಿ ತಾ ದುಡಿಯಬಾರದು ಅಲ್ಲಿ:
ದುಡಿಮೆಯನಿಬರಿಗಾಗಿ; ತಾನೊಬ್ಬನನಿಬರಲ್ಲಿ!
ಸರ್ವಮನುಜರಿಗಾಗಿ ಸೃಷ್ಟಿ
ಎಂಬ ಸಮದೃಷ್ಟಿ!—
ಎಲ್ಲವರ ಸುಖಕಾಗಿ ಗೆಯ್ಯಬೇಕೆಲ್ಲ;
ಆದರೂ ಸುಖಿಗಳೆನಗೊಬ್ಬರೂ ಕಾಣಲಿಲ್ಲ!—
ಕೈಯ ಗೆಯ್ಮೆಯ ಬೆವರು ದಣಿವುಗಳಿಗದು ಬೀಡು.
ಕನಸೆಂದರಾಗದವರಿಗೆ: "ತಳ್ಳು! ಕನಸನಾಚೆಗೆ ದೂಡು!"
ಆದರೂ ಮುಂದೆ ಸೊಗವಹುದೆಂಬ ಹೆಗ್ಗನಸಿನಡಿಗಳಲಿ
ಕನಸಿನಾ ಹಗೆಗಳೆಲ್ಲರು ಕುರಿಗಳಂತೆ ಬಲಿ!
ನೋಡುವವರಿಗೆ ದೊಡ್ಡ ಜೈಲು;
ಮಾಡುವವರಿಗೊ ಬರಲಿರುವ ಸೊಗಕೆ ಸುಗ್ಗಿಕೊಯಿಲು!

ಮಾರ್ಗದರ್ಶಿಯ ಕೂಡಿ ನೋಡುತ್ತ ಹೋದೆ;
ನೋಡಿದಂತೆಲ್ಲ ನಾ ಬೆಪ್ಪು ಬೆರಗಾದೆ:

ಯಂತ್ರನಾಗರಿಕತೆಯ ವಿಜ್ಞಾನ ಬುದ್ಧಿ
ತಾನಲ್ಲಿ ಪಡೆದಿತ್ತು ಪರಮ ಸಿದ್ಧಿ.
ಹೊಲದಲ್ಲಿ ಮನೆಯಲ್ಲಿ ಹಳ್ಳಿಯಲಿ ನಗರದಲಿ,
ಪಂಕ್ತಿ ಪಂಕ್ತಿಯ ಯಂತ್ರವೆಲ್ಲಿ ನೋಡಿದರಲ್ಲಿ.
ದೇಶವೆಲ್ಲವು ದೊಡ್ಡದೊಂದು ಕಾರ್ಖಾನೆ;
ಪ್ರತಿಯೊಬ್ಬ ಮಾನವನು ಯಂತ್ರದಂತಿದ್ದಾನೆ!
ಮಾತನಾಡುವುದಿಲ್ಲ ಯಾರೊಬ್ಬರೂ ಒಂದು ಸೊಲ್ಲು:
ಹರಟೆಯಲಿ ಕಾಲ ಕಳೆದರೆ ಶಿಕ್ಷೆ—ಗಲ್ಲು!
ಉತ್ಪತ್ತಿ, ಉತ್ಪತ್ತಿ, ಉತ್ಪತ್ತಿ, ಮತ್ತೆ ಉತ್ಪತ್ತಿ:
ಸೋವಿಯಟ್ ವೈಷ್ಣವರ ಧರ್ಮಕದು ಪರಮ ಪ್ರಪತ್ತಿ!
ಮಾತಾಡಲಿಲ್ಲ ನಾನೊಂದು ಸೊಲ್ಲು;
ಎಲ್ಲಿಯಾದರು ತಪ್ಪಿ ನುಡಿದರೆ ತಲೆಗೆ ಕಲ್ಲು!

ಮಾರ್ಗದರ್ಶಿಯ ಕೂಡೆ ನಡೆದು ಮುಂದೆ
ಕಂಡು ಸೋಜಿಗಗೊಂಡು ನಾನೆಂದೆ:
"ಏನದಾ ಕರಡಿ ಕಪಿಗಳ ದೊಡ್ಡ ಮಂದೆ
ತಿರುಗುತಿದೆ ಬಯಲಿನಲಿ ಹಿಂದೆ ಮುಂದೆ?"
ಹೇಳಿದನು ಅವನು ಕನಿಕರದ ನಗೆಗೂಡಿ
ಪೆಚ್ಚಾದ ನನ್ನ ಮೋರೆಯ ತಿವಿದು ನೋಡಿ:
"ನರರಾದರೇನಂತೆ? ಮೃಗವಾದರೇನಂತೆ?
ರಷ್ಯದಲಿ ಸೋಮಾರಿಗೆಡೆಯಿಲ್ಲ, ಕೂಳಿಲ್ಲ;
ಪ್ರಾಣಿಗಳಿಗೂ ಇಲ್ಲಿ ಸಾಮ್ಯವಾದದ ಚಿಂತೆ!
ದುಡಿಯದಿರೆ ಮಿಡಿ ಹಕ್ಕಿಗಾದರೂ ಒಂದು ಕಾಳಿಲ್ಲ!—
ಕರಡಿ ಕಪಿಗಳಿಗಲ್ಲಿ ನಡೆಯುತಿದೆ ಡ್ರಿಲ್ಲು,
ಮುಂದೆ ಬರಲಿಹ ಸಮರಕಿಂದೆ ಸಮೆಯುತಿದೆ ಬಿಲ್ಲು—
ಬಾಳೆಂಬುದೊಂದು ನಿಷ್ಕರುಣ ಮಿಲ್ಲು;
ಸರ್ವ ಪ್ರಾಣಿಗಳದಕೆ ಬೀಸುವಾ ನೆಲ್ಲು;
ಎಂಬುದೆಮ್ಮಯ ತತ್ವದಡಿಗಲ್ಲು!"
ತಪ್ಪಿ ನುಡಿದರೆ ತಲೆಗೆ ಕಲ್ಲು

ಎಂದು ನಾ ಮಾತಾಡಲಿಲ್ಲೊಂದು ಸೊಲ್ಲು.
ನೋಡುತ್ತ ನೋಡುತ್ತ ನೋಡುತ್ತ ಹೋದೆ ಹೋದೆ ಹೋದೆ ;
ಅದ್ಭುತದ ಮೇಲದ್ಭುತವ ಕಂಡು ಬಾಯಿಲ್ಲದಾದೆ :
ಕತ್ತೆ ಹಿಂಡಿಗೆ ಒಂದು ಕಡೆಯಲ್ಲಿ ಸಾಮ್ಯವಾದದ ಬೋಧೆ
ಭರದಿಂದ ಸಾಗುತಿತ್ತು ;
ಮತ್ತೊಂದು ತಾಣದಲಿ ಹಂದಿಯೊಂದಕೆ ಕಠಿನ ಶಿಕ್ಷೆ;
ಕಿರ್ರೆಂದು ಕೂಗುತಿತ್ತು !
ಸಾಮ್ಯವಾದದ ನೀತಿಯನು ಮೀರಿ ತಿಂದಿತಂತೆ ;
ಅದರಿಂದ ಆ ಹಂದಿ ಕ್ಯಪಿಟಲಿಸ್ಟಂತೆ !

ಮಾರ್ಗದರ್ಶಿಯು ಕರೆಗೆ ಮುಂಬರಿಯುತಿದ್ದೆ ;
ಕಾಲು ಕಾಲಿಗೆ ತಗುಲಿ ಎಡವಿ ಬಿದ್ದೆ.
ಮೈಕೊಡವಿಕೊಳ್ಳುತ್ತ ಫಕ್ಕನೆಯೆ ಮೇಲೆದ್ದು
ನಿಂತಿರಲು, ಕೇಳಿಸಿತ್ತಲ್ಲಿ ಪಕ್ಕದೊಳೊಂದು ನರಳು ಸದ್ದು.
ನೋಡಿದರೆ, ಆ ಸಂದಣಿಯ ಗಲಿಬಿಲಿಯ ಹೋರಟೆಯ ಮಧ್ಯೆ,
ಯಂತ್ರ ಸಂಕುಲ ಕಾರುತಿಹ ಧೂಮಮಧ್ಯೆ,
ಬಿಡುವಿರದೆ ತಿರುಗುವಾ ಯಾನ ಚಕ್ರದ ಧೂಳಿಯಲ್ಲಿ,
ಹಸುರೆಂಬ ಮರನೆಂಬ ಹೆಸರಿರದ ಆ ತಾಣದಲ್ಲಿ,
ಅಯ್ಯೊ ಆ ಬಟ್ಟಬಯಲಿನ ಹಾಳು ಬಹಿರಂಗದಲ್ಲಿ
ಕೋಗಿಲೆಯದೊಂದು ಕಸ್ರಗೆ ಹದುಗಿ ಕೂತಿತ್ತು ;
ಕಃಪದಾರ್ಥವದಾಗಿ ಲಕ್ಷ್ಯಬಾಹಿರವಾಗಿ ನರಳಿ ಕೂತಿತ್ತು !
ನಳನಳಿಪ ಮಾಮರದ ಕೆಂದಳಿರನುಂಡು
ಕುಕಿಲುವಾ ಚೈತ್ರದೂತನ ದುಃಸ್ಥಿತಿಯ ಕಂಡು
ನೋವಿನಿಂದಲುಗಾಡದಾದೆ ಬೆಕ್ಕಸಗೊಂಡು.
ಹೇಳಿತದು ಕಣ್ಣೀರು ಕರೆದು
ಯಂತ್ರಪಕ್ಷಿಯ ತೆರದಿನಿಂಚರವ ತೊರೆದು
ಕರ್ಕಶಧ್ವನಿಯಿಂದೆ ಮೊರೆದು :
“ ಕವಿವರ್ಯ, ಇದುವರೆಗೆ ಸಂಸಾರ ಕಷ್ಟಗಳನುಳಿದು,
‘ಸುಖಗಳನೆ ಮಾತ್ರ ತಿಳಿದು,

ವನವನವ ಸಂಚರಿಸಿ, ಹಾರಾಡಿ, ಹಾಡಿ,
ಹಣ್ಣು ಹಂಪಲು ತಿಂದು, ಬೇಟದಲಿ ಜತೆಗೂಡಿ,
ಹೆತ್ತು ಸಲಹುವ ಹೊರೆಯ ಹೊಣೆಯನೀಡಾಡಿ,
ಕಾಗೆಗಳ ಗೂಡಿನಲಿ ಮೋಸದಿಂ ಮೊಟ್ಟೆಯಿಟ್ಟು,
ಮರಿಗಳಾರೈಕೆಯನು ಅವುಗಳಿಗೆ ಬಿಟ್ಟು
ನಲಿದಿದ್ದೆ ಕವಿಸ್ತುತಿಯ ಸೂರೆಮಾಡಿ.
ಕಾಗೆಗಳೊ, (ಬುದ್ಧಿಯಿಲ್ಲದ ಪೆದ್ದ ಪ್ರೊಲಿಟೇರಿಯಟ್ಟು !)
ಚೈತ್ರದಲಿ ರಟ್ಟಾಗುವನ್ನೆಗಂ ಗುಟ್ಟು,
ತಮ್ಮ ಮರಿಗಳ ಕೂಳನನ್ಯರ್ಗೆ ಗುಟುಕು ಕೊಟ್ಟು
ಕೋಳುಹೋಗುತ್ತಿದ್ದುವಂದು ಜ಼ಾರ್ ಇದ್ದ ಯುಗದಲ್ಲಿ !
ಇಂದು, ಈ ವಿಪರೀತ ಕಾಲದಲ್ಲಿ,
ನನ್ನ ಮೊಟ್ಟೆಯ ಮೇಲೆ ನಾನೆ ಕಾವಿಗೆ ಕೂತು
ಮರಿಮಾಡಬೇಕೆಂದು ಸೋವಿಯಟ್ ತಾಕೀತು !
ಮರದ ಮೇಗಡೆ ಗೂಡು ಕಟ್ಟಿದರೆ ಸಾಮ್ಯವಾದಕೆ ಕುಂದು,
ಹಂದಿಗಳ ಕರುಬಿಗೂ ಗುರಿಯಾಗಬೇಕೆಂದು
ಇಲ್ಲಿ ಮೊಟ್ಟೆಯನಿಟ್ಟು ಕಾವು ಕೂತಿದ್ದೇನೆ ;
ಮೊತ್ತಮೊದಲನೆ ಹೊಚ್ಚಹೊಸ ಚೊಚ್ಚಲನುಭವಕೆ ಕಾಯು
ತಿದ್ದೇನೆ."
ಕೋಗಿಲೆಯ ನುಡಿಗಳನು ನಂಬಲಾರದೆ ಮೆಲ್ಲನದನೆತ್ತಿ
ನೋಡಿದರೆ, ಕಂಡುವದೊ ದೂಳಿನಲಿ ಎರಡು ಕರಿತತ್ತಿ !
ಬಾಗಿದೆನ್ನಯ ಕಿವಿಗೆ ಕೇಳಿಸಿತು ಕೋಗಿಲೆಯ ದೀನವಾಣಿ :
"ಒಂದು ಮೊಟ್ಟೆಯನಾದರೂ ಕದ್ದುಕೊಂಡೊಯ್ಯು ನಿನ್ನೂರಿಗೆ,
ಪರಪುಟ್ಟರಿಗೆ ತವರುಮನೆಯಾದ ಮೈಸೂರಿಗೆ.''
ಪಾಪ ! ಬಡ ಪ್ರಾಣಿ,
ತನ್ನೊಂದು ಮರಿಯಾದರೂ ಹಾಡಿ ನಲಿಯಲಿ ಎಂದು
ಕನ್ನಡದ ಕಬ್ಬಿಗನ ಬೇಡಿತೆಂದು,
ಮಾರ್ಗದರ್ಶಿಯ ಕಣ್ಗೆ ಬೀಳದಂತೆ,
ಒಂದು ಮೊಟ್ಟೆಯನೆತ್ತಿ, ಜೇಬಿಗಿಳಿಬಿಟ್ಟು, ನಿಂತೆ ....

ಎಲ್ಲ ನೋಡಿದ ಮೇಲೆ
ಮಾರ್ಗದರ್ಶಿಯನು ಬೀಳ್ಕೊಂಡು ಬರುವಾ ವೇಳೆ,
ಜೇಬಿನಲ್ಲಿದ್ದ ಕೋಗಿಲೆಮೊಟ್ಟೆಯನು ಕೈಯೊಳಾಂತೆ ;
ನೋಡುತಿರಲದು ಚಿಮ್ಮಿ ನೆಗೆದಿಳೆಗೆ ಬಿತ್ತು ;
ಬಿರಿದಯ್ಯೊ ಚೂರು ಚೂರಾದತ್ತು !
ಏನ ಕಾಣುತಿಹೆ ನಾನೆನಗೇನು ಭ್ರಾಂತೆ ?
ಮೊಟ್ಟೆಯಿಂದುದ್ಭವಿಸಿದುದು ಕೋಗಿಲೆಯ ಕಂದನಲ್ಲ :
(ಸಾಮ್ಯವಾದದ ಮಹಿಮೆ ! ಮೇಣದರ ಬೋಧೆ !
ಸಂತಾನ ಪರಿಣಾಮವನು ಕಂಡು ಬೆರಗಾಗಿ ಹೋದೆ !)
ಮೊಟ್ಟೆಯಿಂದೈತಂದುದೇನು ? ಪಿಕಶಿಶುವಲ್ಲ !-
ಮೂಡಿಬಂದೆನ್ನ ಹಿಡಿದನು ಸೋವಿಯಟ್ಟೊಬ್ಬ ಗೂಢಚಾರ !
ಕೋಗಿಲೆಯ ಮೊಟ್ಟೆಯೊಳಗೂ ಕೂಡ ಸಾಮ್ಯವಾದ ಪ್ರಚಾರ !

---

## ಮೈಸೂರು-ಬೀಹಾರ

ಭುವನ ಗಗನ ಸರ್ವಗ್ರಾಸಿ
ನಿಶಾಸರಸ್ತೀರದಿ
ಶತಸಹಸ್ರದಲದ ಮಹಾ
ದಿವಾಪದ್ಮ ಮುಕುಳವಹಾ !
ದಳ ದಳ ದಳವರಳುತ್ತಿದೆ
ಪೂರ್ವದಿಶಾ ದೂರದಿ !

ತಿಮಿರ ಜಲತರಂಗರಾಶಿ
ವರುಣ ದಿಕ್ಕಿಗುರುಳಿದೆ.
ಅರುಣತರುಣನಿನಿಯಕಾಂತೆ
ಉಷೆಯು ಹಿಡಿದ ಸೊಡರಿನಂತೆ
ಮುಗಿಲಿನಂಚು ಬಿರುಕುಗಳಲಿ
ಹೊನ್ನಿನುರಿಯು ಕೆರಳಿದೆ !

ಇಂಪು ಕಂಪು ತಂಪುವೆರಸಿ
ಮೆಲುಗಾಳಿಯು ತೀಡಿದೆ.
ಸುಪ್ರಭಾತ ಪಕ್ಷಿಗಾನ
ಕೇಳುತಲಿದೆ ತಾನತಾನ:
ನೀರವತಾ ನೀರಧಿಯಲಿ
ನಾದವೀಚಿ ಮೂಡಿದೆ!

ಥರ ಥರ ಥರ ಕಂಪಿಸುತಿವೆ
ತಳಿರ್ಗಳರಳಿಮರದಲಿ.
ಕಿರಣದೀಪ್ತ ಬಾಲಪರ್ಣ
ಗಳಲಿ ನೋಡು, ರಕ್ತವರ್ಣ!
ಚಿಮ್ಮುತಿಹುದು ರಸದ ಬುಗ್ಗೆ
ಪ್ರಕೃತಿ ದೇವಿಯುರದಲಿ!

ಇಂದುವದನೆ ಕುಂದರದನೆ,
ಇಲ್ಲಿ ಪ್ರಕೃತಿ ರೂಪಸಿ!
ಅಲ್ಲಿ ಭೂಮಿ ನಡುಗಿತಂತೆ;
ಲಕ್ಷ ಲಕ್ಷ ಮಡಿದರಂತೆ:
ರಕ್ತನಖಿ, ರಕ್ತಮುಖಿ,
ಅಲ್ಲಿ ಪ್ರಕೃತಿರಾಕ್ಷಸಿ!

ನೆಲವು ನಡುಗಿ ಮನೆಗಳುರುಳಿ
ಹಿರಿಯು ಕಿರಿಯರೆಲ್ಲರು
ತಾಯಿ ಕೂಸು ಗಂಡು ಹೆಣ್ಣು
ಸತ್ತರಯ್ಯೊ, ಮುಚ್ಚಿ ಮಣ್ಣು!
ಏಕೆ? ಇದಕೆ ಹೊಣೆಯದಾರು?
ಯಾರು ಹೇಳಬಲ್ಲರು?

ಕೆಲರು ಹೇಳಬಲ್ಲರಂತೆ!
ಏನು ಹೇಳಬಲ್ಲರು?
ನಡುಗಿತೆಂದು ಹೇಳುವುದನೆ

'ಭೂಮಿಕಂಪ' ಎನಲು, ಅದನೆ
ವಿವರವೆಂದರಾಯಿತೇನು ?
ಬರಿಯ ಮಾತುಗಳ್ಳರು !

ಇಲ್ಲಿ ನಲಿಯುತಿಹುದು ತಳಿರು ;
ಎಲ್ಲ ಚೆನ್ನು, ಚೊಕ್ಕಟ !
ಇಲ್ಲಿ ಉಲಿಯುತಿಹುದು ಹಕ್ಕಿ—
ಅಲ್ಲಿ ? ತೊಲೆಯ ಕೆಳಗೆ ಸಿಕ್ಕಿ
ಕಂದನಪ್ಪಿದಮ್ಮನೊರಲೆ,
ಗೋಳೆಗೋಳು ಅಕ್ಕಟಾ !

ಒಬ್ಬ ದೇವರೊಂದೆ ಸೃಷ್ಟಿ ;
ಅದರೊಳಿಷ್ಟು ಭೇದವೆ ?
ಒಂದು ಕಣ್ಗೆ ಬೆಣ್ಣೆತಿಕ್ಕಿ,
ಒಂದು ಕಣ್ಗೆ ಸುಣ್ಣವಿಕ್ಕಿ,
ಒಂದು ನಗಲು, ಒಂದು ಅಳಲು,
ಅವನಿಗೊಂದು ಮೋದವೆ ?

ಭೀತಿ, ಶೋಕ, ಸರ್ವನಾಶ,—
ಇದುವೆ ಮತಿಯ ಉತ್ತರ :
ತಣ್ಣಗಾಗುತಿಹನು ಸೂರ್ಯ,
ಜಗವಿದೊಂದು ಹಗೆಯ ಕಾರ್ಯ,
ಪ್ರಕೃತಿ ಹೃದಯ ಬರಿಯ ಕ್ರೌರ್ಯ, —
ಇದೆ ವಿಚಾರದುತ್ತರ !

ಆದರಾಲಿಸೆದೆಯ ವಾಣಿ
ಬೇರೆ ಕಥೆಯ ಹೇಳಿದೆ ;
ಕಷ್ಟ ನಷ್ಟವೆಲ್ಲ ಬರಲಿ,
ನೋವು ಸಾವು ಏನೆ ಇರಲಿ,
ಸೃಷ್ಟಿ ಮುಖ ಪರಮಸುಖ
ಎಂದು ಧೈರ್ಯ ತಾಳಿದೆ !

ಸೃಷ್ಟಿಯೊಂದನಂತ ಚಲನೆ,
  ಅಖಂಡ ಪ್ರಾಣವಾಹಿನಿ.
ಕ್ಷಣವ ಕಣವನರಿವ ಬುದ್ಧಿ
ಕಾಲದೇಶನದಿಯೊಳದ್ದಿ
ಹೊಕ್ಕು ಹರಿದು ತಿಳಿಯಲರಿದು :
  ಅಗಮ್ಯವದಕೆ ವಾಹಿನಿ !

ಶಿಲ್ಪ ಕೃತಿಯು ರಚನೆ ಸಾಕು
  ಶಿಲ್ಪಿವರನ ನಂಬಲು.
ಅಗ್ನಿ ಮೇಘವೊಂದರಿಂದ
ಸೂರ್ಯಗ್ರಹಗಳೆಲ್ಲ ಬಂದ
ಸಾಕ್ಷಿಗಿಂತ ಹಿರಿಯ ಸಾಕ್ಷಿ
  ನರನ ಎದೆಯ ಹಂಬಲು !

ಮುಳಿಯಬೇಡ, ಹಳಿಯಬೇಡ ;
  ಶಾಂತಿ ಬಂದೆ ಬರುವುದು.
ಕೇಡು ತುತ್ತತುದಿಯದಲ್ಲ ;
ಬೇವಿನಾಚೆಗಿಹುದು ಬೆಲ್ಲ.
ಕೇಡು ಲೇಸುಗಳನು ಮೀರಿ
  ಮಹಾನಂದವಿರುವುದು !

ಮೃತರ ಗತಿಯೆ ? ಚಿಂತೆಯೇಕೆ ?
  ಅಲ್ಲಿರುವುದೆ ಇಲ್ಲಿಯೂ !
ಇಂದು (ಮುಂದೆ ಏನೆ ಬರಲಿ)
ನರಗೆ ನರನ ನೆರವು ಇರಲಿ !
ಇಲ್ಲಿ ಒಲಿದರೊಲಿವೆವಲ್ಲಿ :
  ಇಲ್ಲಿರುವುದೆ ಅಲ್ಲಿಯೂ !

---

# ತಣ್ಣೆಳಲು

ಆ ಮರದ ತಣ್ಣೆಳಲು !
ಹುಲ್ಲು ಮೈದಾನದಲಿ ನೋಡೆನಿತು ಇಂಪಾಗಿ,
ಕಂಗಳಿಗೆ ತಂಪಾಗಿ, ಸೊಂಪುದಳಿರಿನ ಪ್ರೀತಿ
ಇಂದ್ರಿಯಂಗಳ ಕಾಣ್ಕೆಗೊಳಗಾದ ರೀತಿಯಲಿ
ಹಸರಿಸಿದೆ, ಮರದೊಂದು ಆಹ್ವಾನವೆಂಬಂತೆ,
ಬಿಸಿಲ ಮರುಭೂಮಿಯಲಿ ನೆಳಲ ಮರುವನದಂತೆ !
ಓ ಮರವೆ, ಆ ನೆಳಲು ನಿನಗೊಂದು ಕರ್ತವ್ಯ ;
ನಿನ್ನ ಕೃಪೆ ; ನಿನ್ನ ಆತ್ಮದ ಒಂದು ಔದಾರ್ಯ !
ನಿನ್ನ ಮೋಣಿನನ ಸಂಭೋಗದಿಂದುದಿಸಿರುವ
ಒಂದು ಆನಂದ ಶಿಶು ! ನಿನ್ನ ಮನಸಿನ ಕನಸು !

ಗಾಳಿಯಲಿ ತಲೆದೂಗುತಿದೆ ಹುಲ್ಲು ಹಿಸ್ಸೆಂಬ
ಮೃದುನಾದದಿಂದ ಚಾಮರವಿಕ್ಕುವಂದದಲಿ,
ಬಯಲು ಮಲಗಿರೆ ತನ್ನ ದೀರ್ಘಕಾಯವ ಚಾಚಿ !
ಮೆಲುಕು ಹಾಕುತಿದೆ ಹಸು ನೆಳಲಿನಲಿ ನೆಳಲಾಗಿ
ಕಣ್ಣನರೆಮುಚ್ಚಿ ಮಲಗಿ. ಅದರ ನೆಳಲಿನ ತೆರದಿ
ಕರುವಿಹುದು ಪಕ್ಕದಲಿ ತಾಯ ಮೈಸೋಂಕಿನಲಿ !

ಸವಿನೆಳಲೆ, ತಳಿರು ಬಿಸಿಲಿನ ತರುದಿನೇಶರಿಗೆ
ಜನಿಸಿರುವ ಹಸುಳೆ, ನಾ ನಿನ್ನ ಔದಾರ್ಯದಲಿ
ಎನಿತು ಸಲ ನಿಂತಿರುವೆ ! ಆವಾವ ರೀತಿಯಲಿ
ಬಣ್ಣಿಸಿಹೆ ! ಒಮ್ಮೆ, ನಿನ್ನನು ದಾಸನೆಂದಾಡಿ
ನಿಂದಿಸಿಹೆ, ನಿನ್ನ ಕರ್ತವ್ಯವನು ಹಳಿದಿರುವೆ
ಚಿತ್ತ-ದಾಸ್ಯಕೆ ಚಿಹ್ನೆಯದು ಎಂದು ; ಕರ್ತವ್ಯ
ದಾಸ್ಯಗಳಿಗನಿತೇನು ಬಾಹ್ಯ ಭೇದಗಳಿಲ್ಲ.
ಅಂದು ಬಾಹ್ಯವ ನೋಡಿ ಅಣಕಿಸಿದೆ, ನಿಂದಿಸಿದೆ ;
ಇಂದು ಅಂತರಂಗವ ಹೊಕ್ಕು ಸುಖಿಸುವೆನು
ನಿನ್ನ ಈ ನಿಷ್ಠೆಯಲಿ ; ನೆಳಲು ನಿನ್ನಯ ನಿಷ್ಠೆ !

ದಾಸ್ಯವಲ್ಲ! ಕವಿಯ ಭಾವದ ಮುಕ್ತಿ ಛಂದಸಿನ
ಸೃಂಖಲೆಯ ಬಂಧನಕೆ ಸಿಲುಕಿದೊಲು ತೋರುತಿದೆ ;
ಆದರಾ ಬಂಧನವೆ ಅದರ ಮುಕ್ತಿಗೆ ಶಕ್ತಿ.
ಏತಕೆನೆ, ಮಾಯೆ ಮುಕ್ತಿಗೆ ಆಳು. ಅದರಂತೆ
ನಿನ್ನ ಸ್ವಾತಂತ್ರ್ಯದಾನಂದದುದ್ಭಾಸವದು
ನೆಳಲಾಗಿ ನಲಿಯುತಿದೆ ಹಸುರು ಬಯಲಲಿ ಮಲಗಿ ;
ಬಳಿಗೆ ಬಂದವರನೂ ನಲಿಸುತಿದೆ ಸಾದರದಿ !

ಸವಿನೆಳಲೆ, ನನ್ನ ಆ ದರ್ಶನವ ಮರೆತುಬಿಡು.
ನನ್ನ ಇಂದಿನ ದರ್ಶನಕೆ ಮನ್ನಣೆಯ ಮಾಡು !

---

## ಯಂತ್ರರ್ಷಿ

ಪ್ರಾಣ ಮೇಣಾಕಾಶಗಳ ಮಹದ್ಗರ್ಭದಿಂ
ಬ್ರಹ್ಮಾಂಡವನು ರಚಿಸಿದಾ ಪರಮ ಪರಮೇಷ್ಠಿ,
ಯಂತ್ರವಿದ್ಯಾಕಲಾಕೋವಿದಂ, ಮಂತ್ರನಿಧಿ,
ಮುನ್ನಮಾದಿಯಲಿ ತನ್ನಾತ್ಮ ಸಂಸ್ಫೂರ್ತಿಯಿಂ
ಸ್ವಾನಂದ ವ್ಯಕ್ತಾಭಿಲಾಷೆಯಿಂ, ಧರ್ಮದಿಂ
ಮೀರಲರಿಯದ ಕಠೋರತರ ನಿಯಮಂಗಳಿಂ
ಬಂಧಿಸಿದನೆಲ್ಲಮಂ ಋತವಜ್ರಪಂಜರದಿ.
ತನ್ಮಧ್ಯೆ ಸ್ವಾತಂತ್ರ್ಯಮೂರ್ತಿ ತಾಂ ನೆಲಸಿಹಂ
ಸರ್ವನಿಯಮಾತೀತನಾಗಿ ; ಋತರಕ್ಷಕಂ
ತಾನಾಗಿ ; ನಿಯಮದುಲ್ಲಂಘನೆಗೆ ಶಿಕ್ಷಕಂ
ತಾನಾಗಿ. ಪ್ರಕೃತಿಯಾತನ ಭೀಷಣಾಣತಿಗೆ
ತಲೆಬಾಗಿ ಸಾಗುತಿದೆ ಕ್ರಮದಿಂದೆ. ನೆಲದಲ್ಲಿ
ಹೊರಳುತಿಹ ಹುಡಿಯಿಂದೆ ಹಿಡಿದು ತಾರಂಬರಂ
ಆ ಪರಮ ಯಂತ್ರಜ್ಞ ಮಂತ್ರ ಸಂಮೋಹದಲಿ
ಮುಗ್ಧರಾಗಿಹರು. ಅವಿಧೇಯತೆಗೆ ಠಾವಿಲ್ಲ.

ಯಾರೆ ಕಾಣಲಿ ಬಿಡಲಿ ಬೆಂಕಿಯುರಿಯಲೆ ಬೇಕು ;
ಯಾರಿರಲಿ ಇರದಿರಲಿ ಗಾಳಿ ತೀಡಲೆ ಬೇಕು ;
ಯಾರಿಲ್ಲವೆಂದರಿತು ನಿಶ್ಚಲ ಸರೋವರಂ
ತನ್ನ ದಡದಲಿ ಬೆಳೆದ ಮರದ ಪ್ರತಿಬಿಂಬವುಂ
ತನ್ನ ಹೃದಯದಿ ಧರಿಸಲೊಲ್ಲೆನೆನಲಾರದಿದೆ.
ಇಲ್ಲಿ ಈ ಭೂಮಿಯಲಿ ಅಧಿಕಾರ ಬಲ ದರ್ಪ
ಐಶ್ವರ್ಯವಿನಿತಿರದ ಪಂಚಮನ ಗುಡಿಸಿಲಲಿ
ಬೆಂಕಿಯು ವಿಧೇಯತೆಯೊಳುರಿವಂತೆ, ಪ್ರಭುವಾಗಿ
ಲೋಕವನ್ನಾಳುವವನರಮನೆಯ ಒಲೆಯಲ್ಲಿ
ಹೆಚ್ಚೇನು ದಾಕ್ಷಿಣ್ಯವಿಲ್ಲದುರಿವಂದದಲಿ,
ಅಲ್ಲಿ ಆ ದೂರದಲಿ, ಶತಕೋಟಿ ದೂರದಲಿ,
ಹೊಳೆವ ಭೀಮಾಕಾರ ತಾರೆಯೊಳುಮಿದರಂತೆ
ತನ್ನ ಕರ್ತವ್ಯದಲಿ ತೊಡಗಿಹುದು.
ಸಭ್ಯತೆಯ
ನರಗೆ ನಂದನವಾಗಿ ನಗೆಸೂಸಿ ನಲಿಯುತಿಹ
ಈ ಕ್ಷೋಣಿಯಾದಿಕಾಲದೊಳಗ್ನಿಪುಂಜದಲಿ
ನೆಲನೀರುಗಾಳಿಗಳು ಬೇರಾಗಿ, ಸಸ್ಯಾದಿ
ಜೀವಗಳಿಗೆಡೆಯಿತ್ತ ಸಮಯದಲಿ, ನಾಗರಿಕ
ಮನುಜ ಸೃಷ್ಟಿಯ ಸ್ವಪ್ನವನು ಕಂಡವರದಾರು ?

ಅಗ್ನಿಜಲವಾಯುಗಳ ಕಠಿನಕರುಣವ ನಂಬಿ
ಜೀವವನು ಹೊರೆಯುತಿರ್ದಾ ಮನುಜ ಮೃಗದಿಂದೆ
ತನ್ನ ಮೇಧಾಶಕ್ತಿಯಿಂ ಪ್ರಕೃತಿಯನೆ ಗೆದ್ದು
ದಾಸ್ಯವನು ನೀಗಿ ಲೋಕೇಶನಾಗಲು ಬಲ್ಲ
ಸುಜ್ಞಾನ ವಿಜ್ಞಾನ ಸರ್ವವಿದ್ಯಾಮೂರ್ತಿ
ನಾಗರಿಕ ಯಂತ್ರರ್ಷಿಯನು ಮಂತ್ರಿಸಿದರಾರು ?
ಸಿಡಿಲು ಮಿಂಚಿಗೆ ನಡುಗುತಂದು ಗುಹೆಗೋಡಿದನು ;

ಅಂದು ಕೊಚ್ಚುವ ಹೊಳೆಯು ಕೈಮುಗಿದು ಬೇಡಿದನು ;
ಇಂದದನು ಕಟ್ಟಿ ಕಿಂಕರನಂತೆ ಮಾಡಿಹನು.
ಅಂದು ಇಂದ್ರಾಗ್ನಿಯರು ದೇವರಾಗಿದ್ದವರು
ಇಂದು ಗದ್ದುಗೆಯಿಳಿದು ದಾಸರೆಮಗಾಗಿಹರು.
ಆ ಮೂಢನರನೆಲ್ಲಿ ? ಈ ಯಂತ್ರಋಷಿಯೆಲ್ಲಿ ?
ಆ ಅನಾಗರನೆಲ್ಲಿ? ಈ ನಾಗರಿಕನೆಲ್ಲಿ ?

ಯುಗಯುಗಗಳಜ್ಞಾನದಿಂದೆಮ್ಮನುತ್ತರಿಸಿ
ವಿಜ್ಞಾನ ವಿದ್ಯೆಯನು ನೀಡಿ ಕಾಪಾಡಿರುವ
ಓ ಮಾನವನ ಧೀರ ಮತಿಯೆ, ನೀನಿಂದೆಮಗೆ
ಆರಾಧ್ಯ ದೇವತೆಯು ! ನಿನ್ನ ಪೂಜಿಪ ನರರು,
ಯಂತ್ರರ್ಷಿ ಮಾನವರೆ, ಮಂತ್ರರ್ಷಿಗಳು ನಮಗೆ !
ಹೇ ಪುಣ್ಯಯಂತ್ರರ್ಷಿ, ನೀನೆಮ್ಮ ವಿಜಿಗೀಷು
ಮತಿಗೆ ಪ್ರತಿನಿಧಿಯಾಗಿ ನಿಂತಿರುವೆ ; ಅದರಿಂದೆ
ರಾಜರಾಜರ ಹೊಗಳಲಾರದೀ ಕಬ್ಬಿಗನ
ವಾಣಿ ನಿನ್ನನು ಕುರಿತು ಹಾಡುತಿದೆ ! ಇನ್ನೆಲ್ಲಿ
ಭೂತಳಾಧಿಪರ ನುತಿ ? ಇನ್ನೆಲ್ಲಿ ಮಾನವರ
ಕೊಲೆಗೈವ ರಕ್ತದಾಹಾತುರರ ವೀರಕಥೆ ?
ಜಯಮಕ್ಕೆ ! ಸೊಗಮಕ್ಕೆ ! ಮನುಜ ಜೀವನ ಶಾಂತಿ
ಸಂಸ್ಥಾಪನೆಗೆ ಯಶೋಲೋಭವಿನಿತಿಲ್ಲದೆಯೆ
ಮೂರ್ಖ ನಿಂದೆಯ ಲೆಕ್ಕಿಸದೆ ದುಡಿವ ಯಂತ್ರರ್ಷಿ,
ನಿನಗೆ ಜಯವಾಗಲಿ ! ಶಾಂತಿ ಸುಖವಾಗಲಿ !

ನಿನ್ನ ತಂತ್ರಕೆ ಮಣಿದು ಹರಿವ ವಾಹಿನಿ ನಿಂತು
ಕೈಮೊಲಕೆ ಕೈ ನೀರನೆರೆಯುತಿದೆ ; ಮರುಭೂಮಿ
ಹಸುರು ನಗೆಯನು ಸೂಸುವುದ್ಯಾನವಾಗುತಿದೆ ;
ಲೋಹ ಸ್ವಪ್ನವ ಕಾಣುತೊರಗಿದ್ದ ಸಹ್ಯಾದ್ರಿ
ನಿನ್ನ ಮಂತ್ರಾಘಾತದಲಿ ನಿದ್ದೆಯಿಂದೆದ್ದು
ಮಾನವಗೆ ಕೈಂಕರ್ಯವೆಸಗುತಿದೆ ! ಓ ಋಷಿಯೆ,
ನೀನು ಮನುಜನ ಮಹಾಮತಿಗೆ ವಿಜಯಪತಾಕೆ !

ಮನುಜ ಮಾನಸ ನಾಕದಿಂದೆ ಧೀ ಗಂಗೆಯಂ
ಭೂಮಿಗೆಳೆತಂದಿರುವ ನೂತನ ಭಗೀರಥನೆ,
ನಿನಗೆ ಜಯವಾಗಲಿ ! ಶಾಂತಿಸುಖವಾಗಲಿ !
ವಿಶ್ವೇಶ ಕೃಪೆಯಿಂದೆ ಧೀಶಕ್ತಿ ಚಿರವಾಗಲಿ !

---

## ರೈತನ ದೃಷ್ಟಿ

ಕರಿಯರದೊ ಬಿಳಿಯರದೊ ಯಾರದಾದರೆ ಏನು ?
ಸಾಮ್ರಾಜ್ಯವಾವಗಂ ಸುಲಿಗೆ ರೈತರಿಗೆ !
ವಿಜಯನಗರವೊ ? ಮೊಗಲರಾಳ್ವಿಕೆಯೊ ? ಇಂಗ್ಲಿಷರೊ ?
ಎಲ್ಲರೂ ಜಿಗಣೆಗಳೆ ನನ್ನ ನೆತ್ತರಿಗೆ !
ಕತ್ತಿ ಪರದೇಶಿಯಾದರೆ ಮಾತ್ರ ನೋವೆ ?
ನಮ್ಮವರೆ ಹದ ಹಾಕಿ ತಿವಿದರದು ಹೂವೆ ?

ಸೋಮಾರಿಗಳಿಗೆ ಸುಖಿಗಳಿಗೆ ರಸಿಕರಿಗಲ್ತೆ
ಸಾಮ್ರಾಜ್ಯವೆಂಬುದದು ಕಾಮಧೇನು ?
ನೃಪ ಎಂಬ ಹೆಸರೊಡನೆ ಮುಡಿಯೊಂದನಾಂತೊಡನೆ
ಕಳ್ಳರೊಡೆಯನು ಕೃಪೆಯ ಮೂರ್ತಿಯೇನು ?
ತಿಂದುಂಡು ಮೆರೆವವರ ಮೆರವಣಿಗೆಗಾನು
ಬಾಯ್ದೆರೆದು ನೋಳ್ಪ ಬೆಪ್ಪಾಗಬೇಕೇನು ?

ಹರಕೆ ಯಾರದೊ ? ಹಬ್ಬವಾರಿಗೊ ? ಅದಾವಗಂ
ಸಾಮ್ರಾಜ್ಯಕಾಳಿಗಾನಲ್ತೆ ಕುರಿ ಕೋಳಿಗೆ ?
ಕುಯ್ಗುರಿಯನೆಂತಂತೆ ಸಾವು ಬದುಕಿನ ನಡುವೆ
ಕರುಣೆ ಗರಗಸದಿಂದೆ ಸೀಳುವರು ಬೆಳೆಗೆ.
ಸಾಕೆನಗೆ, ಸಾಕಯ್ಯ, ಸಾಮ್ರಾಜ್ಯ ಪೂಜೆ :
ಸಿಡಿಮದ್ದಿನಕ್ಷತೆಗೆ ಗುಂಡು ಚರೆ ಲಾಜೆ !

ನೇಗಲಿನ ಮೇಲಾಣೆ ! ಬಸವಗಳ ಮೇಲಾಣೆ !
ನೆತ್ತರಿಲ್ಲದೆ ಸುಕ್ಕಿ ಸೊರಗಿದೆನ್ನಾಣೆ !

ಸಾಮ್ರಾಜ್ಯ ಶೂರ್ಪನಖಿ ಮೋಹಿನಿಯ ರೂಪಕ್ಕೆ
ಮರುಳಾಗೆನೆಂದಿಗೂ, ಸೀತೆ ಮೇಲಾಣೆ!
ಬಡತನದ ಗೊಬ್ಬರವನನುದಿನಂ ಹೀರಿ
ಹಿಡಿಸದೋ ಸಾಮ್ರಾಜ್ಯ ಸಿರಿಯ ಕಸ್ತೂರಿ!

---

## ಗೊಬ್ಬರ

"ಗೊಬ್ಬರದ ಮೇಲೆ ಬರೆವುದೆ ಕಬ್ಬಮಂ? ಹಾ
ಕಡುಕಷ್ಟ! ಕಲಿಕಾಲಕೇನೇನು ಬಂದಪುದೊ?
ಸಾಲದೇಂ ಪ್ರಲಯಕಿದೆ ಪೀಠಿಕೆ? ಇನ್ನೇನು
ಕಾರಣಂ ಬೇಕಯ್ಯ ನಿನಗೆ, ತಾಂಡವ ಮೂರ್ತಿ,
ಕಲ್ಕ್ಯವತಾರವನೆತ್ತಿ ಬರೆ? ಇದಕಿಂತ
ಧರ್ಮವಧೆ ಬೇರುಂಟೆ? ನಿರ್ಮಲ ಸರಸ್ವತಿಯ
ವೀಣೆಯಂ ಶೂದ್ರಂ ಕಸಿದುಕೊಂಡು ಗೊಬ್ಬರದ
ಗುಂಡಿಯನ್ನಗೆಯೆ ಗುದ್ದಲಿಯ ಮಾಡಿಹನಲ್ಲ!
ಶಿವನೆ, ಭೈರವನಾಗಿ ಬಂದು ಹಣೆಗಣ್ಣಿನಿಂ
ಕಿಡಿಗೆದರಿ ಬೂದಿ ಮಾಡದೆ ಸುಮ್ಮನಿಹೆಯಲ್ಲ!"

"ಕವಿತೆ, ಭೂಪಾಲರರಮನೆಯಲ್ಲಿ ಕೈ ಕೆಸರು
ಮಾಡಿಕೊಳದೆಯೆ ಮೊಸರನುಣುತಿರ್ದ ಪಂಡಿತರ
ದಿವ್ಯ ಜಿಹ್ವಾ ಲಸದ್ರಂಗದಲಿ ಕುಣಿದಾಡಿ
ಸುಳಿದಾಡಿ ನಲಿದಾಡಿದಾ ನೀನು, ಹಾ! ಇಂದು
ಕೊಳೆತು ನಾರುವ ರೈತನೊಡಗೂಡಿ ಒದ್ದಾಡಿ,
ಗಂಧ ಪುನುಗು ಜವಾದಿ ಕಸ್ತೂರಿಗಳನುಳಿದು
ಸೆಗಣಿಗಂಪಾಘ್ರಾಣಿಸಂತಾಯ್ತೆ? ಕೋಕಿಲೆಯ
ಸ್ತೋತ್ರಗೈದಾ ನೀನು ಪಾಳು ಗೂಬೆಯ ಕುರಿತು
ಪಾಡುವಂತಾಯ್ತೆ? ಪೆರೆನೊಸಲು, ಕೆಂದುಟಿ, ಕೆನ್ನೆ,
ಚಂದ್ರಾನನಂ, ಕಮಲನಯನಂ, ಲಸನ್ನೀಲ

ಕುಂತಳಂ, ಚಾರು ವಕ್ಷಸ್ಥಳಂ, ನುಣ್ಪು ತೊಡೆ,
ಜಘನಂ ನಿತಂಬಂಗಳಲ್ಲಿ, ಕೆಂದಾವರೆಯ
ಮೆಲ್ಲಡಿಗಳಲಿ ವಿಹರಿಸಿದ ಕಾವ್ಯಪಂಕಜೆಯೆ,
ನಿನಗಿಂದು ಕೆಸರೆ ಮನೆಯಾಗಿದೆಯೆ ? ನಂದನಂ
ಮರುಭೂಮಿಯಾದುದೇ ? ರಣವೀರ ಪಾರ್ಥಿವರ
ರಕ್ತತೃಷ್ಣೆಯ ಕರ್ಮಮಂ, ಖಡ್ಗಧನುಗಳಂ,
ಬಾಣಪ್ರಯೋಗ ಕೌಶಲಮಂ, ಕಿರೀಟಾದಿ
ವಸನ ಭೂಷಣ ತನುತ್ರ ಶಿರತ್ರ ವಿಭವಮಂ
ವರ್ಣಿಸಿದ ನೀನಿಂದು ನೇಗಿಲಂ ಹಾರೆಯಂ
ಮಣ್ಣಗೆವ ಕಜ್ಜಮಂ ನೆರೆ ವರ್ಣಿಪಂತಾಯ್ತೆ ?
ದುಷ್ಯಂತ ದಶರಥ ಶ್ರೀರಾಮನರ್ಜುನಂ
ಕೌಶಿಕ ಪರಶುರಾಮ ಭೀಷ್ಮದ್ರೋಣಾದ್ಯರಂ
ಬಣ್ಣಿಸಿದ ನೀನು—ಕರಿಸಿದ್ದ ಕಿಟ್ಟಯ್ಯರಂ,
ದುರ್ದಮ ಕುರುಕ್ಷೇತ್ರಮಂ, ಮೇಣ್ ಪುರಾಣದಾ
ಲಂಕೆಯನ್ನುಳಿದು, ಹಾ ! ಒಂಟಿಕೊಪ್ಪಲಿನಾಚೆ
ಬೋಡಾದ ಬೋರೆಯಂ, ಮಲೆನಾಡ ಕೊಂಪೆಯಾ
ಕಾಡು ಮೇಡುಗಳಂ ಕುರಿತ್ತುಲಿವ ಗತಿಯಾಯ್ತೆ ?"

"ಕಬ್ಬಿಲರು ಕಬ್ಬಿಗರು ತಾವೆನುತ್ತಬ್ಬರಿಸಿ
ಬೊಬ್ಬಿರಿಯೆ ಕಬ್ಬವಾದುದೆ ? ಗೊಬ್ಬರದ ಮೇಲೆ
ಕಬ್ಬವಪ್ಪೊಡೆ ಗಂಡು ಗಬ್ಬವಾದಂತಲ್ತೆ ?
ಅಬ್ಬಬ್ಬ, ಕಲಿಕಾಲಕೇನಾದರಾಗುತದೆ !"

"ಗೊಬ್ಬರವನಲ್ಲಗಳೆಯುವೆ ಏಕೆ ಮರದ ತುದಿ
ನಲ್ಗಂಪುವೆತ್ತು ತಂಗಾಳಿಗೊಲೆಯುವ ಹೂವೆ ?
ಬೇರುಗಳಿಗಿಲ್ಲದಿರೆ ಗೊಬ್ಬರಂ ಹೇಳೆನಗೆ
ವೃಕ್ಷಕೆಲ್ಲಿಯದು ಹೂವಿನ ಹಬ್ಬ ? ಗೊಬ್ಬರದ
ಜೀವವನೆ ಹೀರಿ ಕೊಬ್ಬಿಹ ಹೂವೆ, ಕಬ್ಬಕ್ಕೆ
ನೀಂ ಮಾತ್ರ ವಸ್ತುವೇಂ ? ನಿನ್ನಂತೆ ಗೊಬ್ಬರಂ

ಕಬ್ಬಕ್ಕೆ ಸಾಮಗ್ರಿಯಾಗಬಾರದೆ ಹೇಳು ?
ಹಳಿಯದಿರೊ; ಇಂದೊ ನಾಳೆಯೊ ನೀನು ಕೆಳಗುರುಳಿ
ಗೊಬ್ಬರದೊಳೊಂದಾಗುವಾ ಮುಂದೆ ಕಾದಿಹುದು !
" ಹಚ್ಚಿಕೊಳ್ಳಿರೊ ಹಚ್ಚಿಕೊಳ್ಳಿ ಪರಿಮಳಗಳಂ
ಗಂಧ ಅತ್ತರು ಪುನುಗು ಕಸ್ತೂರಿ ಇತ್ಯಾದಿ
ತರತರದ ಭೋಗವಂ ! ಇನ್ನೇಸು ದಿನ ತಾನೆ
ಹಚ್ಚಿಕೊಳ್ಳುವಿರದನು ನಾ ಕಣ್ಣಿನಲಿ ಕಾಂಬೆ !
ನಾಮ ಮುದ್ರೆ ವಿಭೂತಿಗಳ ಬಳಿದುಕೊಂಬವರು
ಕತ್ತಿಯಂದದಿ ಗದ್ದೆಯಲಿ ಗೆಯ್ದು ಮೈಬೆವರು
ಸುರಿಸಿ ಗೊಬ್ಬರ ಮಣ್ಣು ಬಳಿದುಕೊಂಬರಿಗಿಂತ
ಮೇಲೆಂಬ ಭಾವ ತಲೆಕೆಳಗಾಗಿ ಹೋಗುತಿದೆ !
ನೇಗಿಲ ಕುಳಂ ದೊರೆಯು ಕತ್ತಿಯಂ ಕಿತ್ತೆಸೆದು
ಮುತ್ತಿನುಂಡೆಯು ಮುಡಿದ ಸಿರಿನೆತ್ತಿಯನ್ನುತ್ತು
ಬತ್ತವಂ ಬಿತ್ತಿ ಬೆಳೆಯುವ ಉತ್ತಮದ ಹೊತ್ತು
ಹತ್ತಿರಕೆ ಹತ್ತಿರಕೆ ಬರುತಿರುವುದೊತ್ತೊತ್ತಿ !
ಗೊಬ್ಬರಂ ಸಿಂಹಾಸನಕ್ಕೇರಿದಾ ದಿನಂ
ತನ್ನ ಹೊಗಳಿದ ಕಬ್ಬಿಲನ ಕಬ್ಬಿಗನ ಮಾಡಿ
ಮೆರೆಯುವುದು ! ಅಂದು ಗೊಬ್ಬರದ ಕಂಪೆಲ್ಲರ್ಗೆ
ಪರಿಮಳದ್ರವ್ಯ ತಾನಾದಪುದು ! ಏತಕೆನೆ,
ಸಿರಿವೆರಸು ಶಕ್ತಿಯಿರೆ ಗೊಬ್ಬರವೆ ಪರಿಮಳಂ !
ಇಲ್ಲದಿರೆ ಪುನುಗು ತಾನಾದೊಡಂ ಗೊಬ್ಬರಂ.

# ಧ್ರಾಂ ಧ್ರೀಂ ಧ್ರೂಂ!

೧

ಘಜ್ನಿಯ ಮಹಮೂದನು ದಂಡೆತ್ತಿ
ಬಂದನು ಪ್ರತಿಸಲವೂ ಮುಂದೊತ್ತಿ.
ಹಣದ ಪಿಶಾಚಿಯು ರಣದ ಪಿಶಾಚಿಗೆ
ಘಜ್ನಿಯ ದೊರೆಯಲಿ ಹಿಡಿದಿತ್ತು;
ಅವನೆದೆಯಲಿ ಮುಸ್ಲಿಮ ಮರುಭೂಮಿಯು
ಕಾಫರ ರಕ್ತವ ಕುಡಿದಿತ್ತು!
ರಾಜಾಸ್ಥಾನದ ರಾಜ್ಯಗಳೆಲ್ಲಾ
ಬಿದ್ದುವು ಪುಡಿಯಾಗುತ ನೆಲಕೆ;
ಗುಡಿಗಳು ಬಿದ್ದು ಮಸೀದಿಗಳೆದ್ದುವು;
ಪಳಿವಾಯಿತು ಕ್ಷತ್ರಿಯ ಕುಲಕೆ.
ಬೆಚ್ಚಿತು ಬೆದರಿತು ವೈದಿಕ ಶಾಂತಿ
ಕೊಚ್ಚಿತು ನಾಡನು ಮ್ಲೇಚ್ಛಕ್ರಾಂತಿ!

೨

ಇಂತಿರೆ, ದೂರದ ಗುಜರಾತಿನಲಿ,
ಮುಸ್ಲಿಮ ದೃಷ್ಟಿಗೆ ಬಹುದೂರದಲಿ,
ಸೋಮನಾಥ ದೇವಾಲಯ ತಾನು
ಪಾವನ ಏಕಾಂತದೊಳಿತ್ತು.
ಸಾಕ್ಷಾತ್ ಕೈಲಾಸವೊ ಇದು ಏನು?
ಎಂಬಂದದಿ ಅದು ಮೆರೆದಿತ್ತು!
ಚಿನ್ನದ ಗೋಪುರ, ರನ್ನದ ಗೊಂಬೆ!
ಅದರೈಸಿರಿಯನು ನೀನೇನೆಂಬೆ?
ಅಲಕಾವತಿಯೂ ಅಮರಾವತಿಯೂ
ಲಕ್ಷ್ಮಿ ಸರಸ್ವತಿ ರತಿ ಪಾರ್ವತಿಯೂ
ಎಲ್ಲವು ಎಲ್ಲರು ಆ ದೇಗುಲದಲಿ

ಸುಖವಾಗಿದ್ದರು ಮಂತ್ರದ ಬಲದಲಿ !
ಗುಜರಾತಿನ ಆ ಮೂಲೆಯಲಿ
ದೂರದ ಮೂಲೆಯಲಿ !

೩

ದೂರದ ಗುಡಿಯದು ತುರುಕರ ಕಣ್ಣಿಗೆ
ಬೀಳದು ಎಂದಾಲೋಚಿಸಿ ತಣ್ಣಗೆ
ಜೀವನಯಾಪನೆ ಮಾಡುತಲಿದ್ದರು,
ಮಂತ್ರಗಿಂತ್ರಗಳ ಹೇಳುತಲಿದ್ದರು
ಆ ನಿಲಯದ ಪೂಜಾರಿಗಳು,
ದೇವರ ಸೋಮಾರಿಗಳು !
ಇಂತಾಲಸ್ಯದೊಳಿರುತಿರೆ ಬುದ್ಧಿ
ಬಂದಿತು ತುರುಕರ ದಾಳಿಯ ಸುದ್ದಿ.
ಕಂಪಿಸಲವರಾ ಡೊಳ್ಳಿನ ಕುಕ್ಷಿ
ನಡುಗಿತು ಪಾರ್ವರ ಶ್ರೀರುದ್ರಾಕ್ಷಿ!
ತಲೆಗಾವರಿಸಿತು ಬೆಪ್ಪು !
ಮುಖಕಾಯಿತು ಕಪ್ಪು !

೪

ಒಡನೆಯೆ ಅರ್ಚಕರೆಲ್ಲಾ ಸೇರಿ
ಮಂತ್ರಾಲೋಚನೆ ಮಾಡಿದರು ;
ಶಾಸ್ತ್ರವನೆಲ್ಲಾ ಕೇರೀ ತೂರಿ
ಬಹು ಸಂಶೋಧನೆ ಮಾಡಿದರು.
ದಿನ ದಿನ ದಿನವೂ ಸೋಮೇಶ್ವರನಿಗೆ
ಹೆಚ್ಚಿಗೆ ಹೊನ್ನಿನ ನಗವಿಟ್ಟು
ಪೂಜಿಸಿದರು ಮಾಹೇಶ್ವರ ಲಿಂಗಕೆ
ಅನ್ನದ ರಾಶಿಯನೇ ಕೊಟ್ಟು !
ಅಸ್ತ್ರಶಸ್ತ್ರಗಳ ಸೇರಿಸಲಿಲ್ಲ ;
ರಣದಾಳುಗಳನು ಕೂಡಿಸಲಿಲ್ಲ.

ಶತ್ರುವಿನಾಶಕ ಮಂತ್ರವನೊಂದನು
ಹಗಲಿರುಳೂ ಹುಡುಕಿದರೆಲ್ಲ!
ಕಡೆಗೊಬ್ಬನೆ ಪೂಜಾರಿಗೆ ಸಿಕ್ಕಿತು
ಭೀಷಣ ಮಂತ್ರವು—'ಧ್ರಾಂ ಧ್ರೀಂ ಧ್ರೂಂ!'
ಆ ಮಂತ್ರದ ವಂಶವನೇನೆಂಬೆನು?
ಅದರ ಪಿತಾಮಹ—'ಹ್ರಾಂ ಹ್ರೀಂ ಹ್ರೂಂ!'
ಮಂತ್ರದ ಶಕ್ತಿಗೆ ಮೇರೆಯೆ ಇಲ್ಲ.
ಆಲಿಸಿ ಪೂಜಾರಿಯ ಸೊಲ್ಲ:
"ಓ ಸೋದರರೇ ಬೆದರುವುದೇತಕೆ?
ಖಡ್ಗಗಿಡ್ಗಗಳ ನೆರವೂ ಏತಕೆ
ಈ ಮಂತ್ರದ ಬಲವಿರೆ ನಮಗೆ?
ಮ್ಲೇಚ್ಛರ ಖಳದಳವಿಲ್ಲಿಗೆ ಬರಲಿ,
ಸಾಸಿರ ಸಾಸಿರ ಸಾಸಿರವಿರಲಿ!
ಒಂದೆ ಮಂತ್ರದಲಿ ಎಲ್ಲರ ಕೊಂದು
ಮಂತ್ರಶಕ್ತಿಯನು ಮಾಡುವೆ ಸಿಂಧು.
ಮಂತ್ರೋಚ್ಚಾರದಿ ಮಂತ್ರಾಕ್ಷತೆಯನು
ಬೀರಿದ ಕೂಡಲೆ ಮುಸಲರು ಚಿತೆಯನು
ಸೇರುವರಯ್ಯಾ ಸೇರುವರು;
ಸುಮ್ಮನೆ ಚೀರುವರು!
ನಮ್ಮಾ ವೈದಿಕ ಧರ್ಮದ ಯುಕ್ತಿಯು.
ನಮ್ಮ ಪುರೋಹಿತ ವರ್ಗದ ಭಕ್ತಿಯು,
ನಮ್ಮ ಸುಧಾಕರ ಮೌಳಿಯ ಶಕ್ತಿಯು
ಮೂರ್ಖರು ಮ್ಲೇಚ್ಛರು ಬಲ್ಲವರೆ?
ಕ್ಷಾತ್ರಶಕ್ತಿಯನು ಗೆದ್ದಂದದಲಿ
ಬ್ರಾಹ್ಮ ತೇಜವನು ಗೆಲ್ಲುವರೆ?"
ಕೇಳಿ ಪುರೋಹಿತರೆಲ್ಲರು ಹಿಗ್ಗಿ
ಸೋಮನಾಥನಿಗೆ ಮಣಿದರು ಬಗ್ಗಿ!

೫

ಯಾಗಕುಂಡವನು ಬೇಗನೆ ಮಾಡಿ,
ಯಜ್ಞಯೂಪವನು ಶೀಘ್ರದಿ ಹೂಡಿ,
ಅಗ್ನಿದೇವನನು ಸ್ಥಾಪನೆಗೈದು,
ತುಪ್ಪಗಿಪ್ಪಗಳ ಬೆಂಕಿಗೆ ಹುಯ್ದು,
ಮೇಷವನೊಯ್ದು, ಮರ್ದಿಸಿ ಹೊಯ್ದು,
ಮಂತ್ರಪೂರ್ವಕದಿ ಮಾಂಸವ ಕೊಯ್ದು,
  ಮ್ಲೇಚ್ಛ ಸೈನ್ಯಗಳ ವಧೆಗಾಗಿ
    ತಿಂದರು ತೇಗಿ!
ಇಂತಿರೆ ದೂರದಿ ಕೇಳಿತು ಸದ್ದು,
ಅರ್ಚಕರೆಲ್ಲರು ನಡುಗಿದರೆದ್ದು.
ಏನಿದು ಎನುತಿರೆ ಬಂದಿತು ಸೈನ್ಯ,
  ಘಜನಿಯ ಮಹಮೂದನ ಸೈನ್ಯ!
ವೀರ ಕರಾಳ ಭಯಂಕರ ಭಟರು,
ಮೃತ್ಯುದೇವತೆಯ ಕೆಚ್ಚಿನ ನಟರು
  ಖಡ್ಗಭಲ್ಲೆಗಳ ಕೈಯೆತ್ತಿ
  ನುಗ್ಗಿ ಬಂದರೈ ಮೇಲೊತ್ತಿ!
ಗುಡಿಯನು ನುಗ್ಗಲು ಮುಸಲರ ದಂಡು
ಶ್ರದ್ಧಾಪೂರ್ವಕ ಅರ್ಚಕ ಹಿಂಡು
  ಮಂತ್ರಾಕ್ಷತೆಯನು ಕೈಕೊಂಡು
  ತಳಿಯುತ್ತೊರಲಿತು "ಧ್ರಾಂ ಧ್ರೀಂ ಧ್ರೂಂ!"
ಗುಡಿಯ ಗೋಡೆಗಳು ಕಲ್ಲುಗೊಂಬೆಗಳು
  ಮರುದನಿಗೈದವು "ಧ್ರಾಂ ಧ್ರೀಂ ಧ್ರೂಂ!"
ಆದೊಡೆ ಮ್ಲೇಚ್ಛರು ಮಡಿಯಲೆ ಇಲ್ಲ;
ಸತ್ತರು, ಪಾಪ, ಪುರೋಹಿತರೆಲ್ಲ.
ನೈಲಿಗೆಯಾಯಿತು ದೇವರ ಮನೆಗೆ;
ಮುಸಲರ ಕೈಸೇರಿತು ಸಿರಿ ಕೊನೆಗೆ.
ಸೋಮೇಶ್ವರ ಸಂಪತ್ತಿನ ಲಿಂಗ

ಕ್ಕಾಯಿತು ಮುಸಲಾಘಾತದಿ ಭಂಗ !
ಧೂರ್ತರ ದಾಳಿಗೆ ಗುಡಿ ವಿಗ್ರಹಗಳು
ಪುಡಿಪುಡಿಯಾದುವು ಗೋಪುರ ಗೃಹಗಳು.
ಎಸೆಯಿತು ಮುಸಲರ ಜಯಭೇರಿ,
ವೀರರ ಜಯಭೇರಿ !

೬

ಗುಡಿ ಹಾಳಾದರೆ ಏನಂತೆ ?
ವೈದಿಕ ಧರ್ಮಕೆ ಅದೆ ಚಿಂತೆ ?
ನಶ್ವರ ಕಾಂಚನ ಹೋದರೆ ಹೋಯಿತು !
ಮಂತ್ರದ ಸಾಮರ್ಥ್ಯವು ಸ್ಥಿರವಾಯಿತು !
ಎಂತೆನೆ,—ಮಂತ್ರಕೆ ಕುಂದೆಲ್ಲಿ ?—
ಆ ಖಲ ಮ್ಲೇಚ್ಛರು ಸತ್ತೇ ಸತ್ತರು !—
ಬಹು ಕಾಲಾನಂತರದಲ್ಲಿ !

---

## ಯಾವ ಕಾಲದ ಶಾಸ್ತ್ರವೇನು ಹೇಳಿದರೇನು ?

ಯಾವ ಕಾಲದ ಶಾಸ್ತ್ರವೇನು ಹೇಳಿದರೇನು ?
ಎದೆಯ ದನಿಗೂ ಮಿಗಿಲು ಶಾಸ್ತ್ರವಿಹುದೇನು ?
ಎಂದೊ ಮನು ಬರೆದಿಟ್ಟುದಿಂದೆಮಗೆ ಕಟ್ಟೇನು ?
ನಿನ್ನೆದೆಯ ದನಿಯೆ ಋಷಿ ! ಮನು ನಿನಗೆ ನೀನು !

ನೀರಡಸಿ ಬಂದ ಸೋದರಗೆ ನೀರನು ಕೊಡಲು
ಮನುಧರ್ಮಶಾಸ್ತ್ರವೆನಗೊರೆಯಬೇಕೇನು ?
ನೊಂದವರ ಕಂಬನಿಯನೊರಸಿ ಸಂತೈಸುವೊಡೆ
ಶಾಸ್ತ್ರ ಪ್ರಮಾಣವದಕಿರಲೆ ಬೇಕೇನು ?

ಪಂಚಮರ ಶಿಶುವೊಂದು ಕೆರೆಯಲ್ಲಿ ಮುಳುಗುತಿರೆ
ದಡದಲ್ಲಿ ಮಿಾಯುತ್ತ ನಿಂತಿರುವ ನಾನು

ಮುಟ್ಟಿದರೆ ಬ್ರಹ್ಮತ್ವ ಕೆಟ್ಟುಹೋಗುವುದೆಂದು
ಸುಮ್ಮನಿದ್ದರೆ ಶಾಸ್ತ್ರಸಮ್ಮತವದೇನು ?

ಅಂತು ಮನು ತಾನು ಹೇಳಿರಲಾರನಯ್ಯಯ್ಯೊ !
ಹೇಳಿದ್ದರವನನೂ ಶಾಸ್ತ್ರದೊಳೆ ಸುತ್ತಿ,
ಸ್ವರ್ಗ ಹೋಗಲಿ, ಮತ್ತೆ ನರಕ ಬಂದರು ಬರಲಿ,
ಎದೆಯ ಧೈರ್ಯವ ಮಾಡಿ ಬಿಸುಡಾಚೆಗೆತ್ತಿ !

ಸ್ವರ್ಗ ಹೋಗುವುದಿಲ್ಲ, ನರಕ ಬರುವುದು ಇಲ್ಲ ;
ಸ್ವರ್ಗ ನರಕಗಳೇನು ಶಾಸ್ತ್ರಸ್ಥವಲ್ಲ.
ಎದೆಯ ದನಿ ಧರ್ಮನಿಧಿ ! ಕರ್ತವ್ಯವದುವೆ ವಿಧಿ !
ನಂಬದನು ; ಅದನುಳಿದು ಋಷಿಯು ಬೇರಿಲ್ಲ !

ಹಿಂದಿನಾ ಋಷಿಗಳೂ ಮಾನವರೆ ನಮ್ಮಂತೆ,
ಅವರ ಶಾಸ್ತ್ರವು ಅವರ ಕಾಲಕ್ಕೆ ಮಾತ್ರ ;
ಕಾಲಕ್ಕೆ ತಕ್ಕಂತೆ, ದೇಶಕ್ಕೆ ತಕ್ಕಂತೆ,
ನಮ್ಮ ಹೃದಯವೆ ನಮಗೆ ಶ್ರೀಧರ್ಮಸೂತ್ರ !

---

## ತರುಣರಿರ, ಎದ್ದೇಳಿ

ಹೋಗುತಿದೆ ಹಳೆಕಾಲ, ಹೊಸಕಾಲ ಬರುತಲಿದೆ,
ಬರುತಲಿದೆ ಹೊಸದೃಷ್ಟಿ ಹೊಸಬಯಕೆಗಳಲಿ.
ಹೋಗುತಿದೆ ಹಳೆಬಾಳು, ಹೊಸಬಾಳು ಬರುತಲಿದೆ,
ಬರುತಲಿದೆ ಕುದಿಗೊಂಡು ತರುಣರೆದೆಗಳಲಿ.
ತರುಣರಿರ, ಎದ್ದೇಳಿ ! ಎಚ್ಚರಗೊಳ್ಳಿ ! ಕೇಳಿ !

ಬೀಸುತಿದೆ ಪಶ್ಚಿಮದ ರಸಪೂರ್ಣ ಹೊಸಗಾಳಿ
ಭಾರತದ ಬಣಗು ಬಾಳ್ಮರವನಲುಗಾಡಿ,
ಉದುರುತಿವೆ ಮುದಿಕಡ್ಡಿ ತರಗು ಹಣ್ಣೆಲೆಗಳೆಲ್ಲ,
ನಲಿಯುತಿವೆ ನಳನಳಿಸಿ ಹೊಸಚಿಗುರು ಮೂಡಿ.
ತರುಣರಿರ, ಎದ್ದೇಳಿ ! ಎಚ್ಚರಗೊಳ್ಳಿ ! ನೋಡಿ !

ಮೊನ್ನೆ ಮೊನ್ನೆಯವರೆಗೆ ಪಶ್ಚಿಮದ ಹೊಲೆಗೇರಿ,
ಇಂದು ನಂದನವಾಗಿ ನಗುತಲಿದೆ ರಷ್ಯಾ.
ಗರ್ಜಿಸಲು ತೊಡಗಿಹುದು ಕೇಸರಂಗಳ ಕೆದರಿ
ಇದುವರೆಗೆ ಮಲಗಿ ನಿದ್ರಿಸುತಿದ್ದ ಏಷ್ಯಾ.
ತರುಣರಿರ, ಎದ್ದೇಳಿ! ಎಚ್ಚರಗೊಳ್ಳಿ! ಕೇಳಿ!

ಹಳೆಮತದ ಕೊಳೆಯೆಲ್ಲ ಹೊಸಮತಿಯ ಹೊಳೆಯಲ್ಲಿ
ಕೊಚ್ಚಿ ಹೋಗಲಿ: ಬರಲಿ ವಿಜ್ಞಾನ ಬುದ್ಧಿ.
ವೇದಪ್ರಮಾಣತೆಯ ಮರುಮರೀಚಿಕೆಯಲ್ಲಿ
ನೀರರಸಿ ಕೆಡದಿರಲಿ ಸ್ವಾತಂತ್ರ್ಯಸಿದ್ಧಿ.
ತರುಣರಿರ, ಎದ್ದೇಳಿ! ಎಚ್ಚರಗೊಳ್ಳಿ! ಬಾಳಿ!

ಹೊಸ ಬಾಳ ಗೀತೆಯನು ದಿಕ್ಕುದೆಸೆ ಬಿರಿವಂತೆ
ಕೊರಳೆತ್ತಿ ಕೈಯೆತ್ತಿ ದನಿಯೆತ್ತಿ ಹಾಡಿ.
ಸೇರಿ ನಡೆದರೆ ನಿಮ್ಮ ತಡೆಯುವವರಾರಿಲ್ಲ;
ಜಗವೆ ಹಿಂಜರಿಯುವುದು ನಿಡುದಾರಿ ನೀಡಿ.
ತರುಣರಿರ, ಎದ್ದೇಳಿ! ಎಚ್ಚರಗೊಳ್ಳಿ! ಮೂಡಿ!

---

## ಓ, ಬನ್ನಿ, ಸೋದರರೆ, ಬೇಗ ಬನ್ನಿ

ಗುಡಿ ಚರ್ಚು ಮಸಜೀದಿಗಳ ಬಿಟ್ಟು ಹೊರಬನ್ನಿ,
ಬಡತನವ ಬುಡಮುಟ್ಟ ಕೀಳಬನ್ನಿ.
ಮೌಢ್ಯತೆಯ ಮಾರಿಯನು ಹೊರದೂಡಲೈತನ್ನಿ,
ವಿಜ್ಞಾನ ದೀವಿಗೆಯ ಹಿಡಿಯ ಬನ್ನಿ.
ಓ, ಬನ್ನಿ, ಸೋದರರೆ, ಬೇಗಬನ್ನಿ!

ಅದೊ ನೋಡಿ, ರಷ್ಯಾ ಜಪಾನು ತುರ್ಕಿಗಳೆಲ್ಲ
ಪರೆಗಳಚಿ ಹೊರಟಿಹವು ಹೊಸಪಯಣಕೆ.
ಬೆಳಗಿಹರು ನೆತ್ತರೆಣ್ಣೆಯ ತಿಳಿವಿನುರಿಯಲ್ಲಿ

ಕಿಚ್ಚಿಟ್ಟು ಹಳೆಕೊಳಕು ಬಣಗು ತೃಣಕೆ.
ಓ, ಬನ್ನಿ, ಸೋದರರೆ, ರಾಷ್ಟ್ರರಣಕೆ!

ಸಿಲುಕದಿರಿ ಮತವೆಂಬ ಮೋಹದಜ್ಞಾನಕ್ಕೆ;
ಮತಿಯಿಂದ ದುಡಿಯಿರೈ ಲೋಕಹಿತಕೆ.
ಆ ಮತದ ಈ ಮತದ ಹಳೆಮತದ ಸಹವಾಸ
ಸಾಕಿನ್ನು ಸೇರಿರೈ ಮನುಜ ಮತಕೆ.
ಓ, ಬನ್ನಿ, ಸೋದರರೆ, ವಿಶ್ವಪಥಕೆ!

---

## ಹೊಸಬಾಳಿನ ಗೀತೆ

"ಸರ್ವರಿಗೆ ಸಮಬಾಳು! ಸರ್ವರಿಗೆ ಸಮಪಾಲು!"
ಎಂಬ ನವಯುಗವಾಣಿ ಘೋಷಿಸಿದೆ ಕೇಳಿ!
ಯುಗಯುಗದ ದಾರಿದ್ರ್ಯ ಭಾರದಿಂ ಬೆನ್ ಬಾಗಿ
ಗೋಳಿಡುವ ಬಡಜನರೆ, ಏಳಿರೈ ಏಳಿ!
ಶ್ರೀಮಂತರಡಿಗಳಡಿಹುಡಿಯಲ್ಲಿ ಹೊರಳಾಡಿ
ಕುಸಿದು ಕುಗ್ಗಿದರೆಲ್ಲ ಸಂತಸವ ತಾಳಿ!
ಕಂಗೆಟ್ಟ ಸೋದರರೆ, ಬರುತಿಹಳು ಕಾಣಿರೈ
ದಾನವರ ಸೀಳಿ ಅದೊ ವಿಪ್ಲವದ ಕಾಳಿ!

ಇಂದ್ರ ಸಿಂಹಾಸನಕೆ ಬಂದಿಹುದು ಕೊನೆಗಾಲ;
ಕಳಚಿ ಬೀಳುವುದಿಂದು ನಂದನದ ಬೇಲಿ!
ದೇವತೆಗಳಶ್ಲೀಲವೋದಕ್ಕೆ ಬದಲಾಗಿ
ಗೋಚರಿಪುದಲ್ಲಿ ಮರ್ತ್ಯರ ಕೃಷಿಯ ಕೇಲಿ!
ದ್ರವ್ಯಾನುಕೂಲತೆಯ ಜಾತಿಯಾ ನೀತಿಯಾ
ಪಕ್ಷಪಾತವನೆಲ್ಲ ಕೊಚ್ಚುವುದು ಬುದ್ಧಿ:
ಮತ್ತೊಂದು ಸಾಕವನೆ ನೆಯ್ಯುವರು ಲೋಕದಲಿ
ದೇವರನ್ಯಾಯವನು ಮಾನವರೆ ತಿದ್ದಿ!

ಕೈಲಾಗದವರೆಂಬ ನಾವು ಕೀಳೆಂದೆಂಬ
ಹಣೆಬರಹವೆಂದೆಂಬ ಮೂಢತೆಯ ನೀಗಿ
ಯುಗಚಕ್ರ ಪರಿವರ್ತನೆಗೆ ಸರ್ವರೂ ಸೇರಿ
ಹೆಗಲು ಕೊಟ್ಟೊಮ್ಮನಸು ಮಾಡಿ ನೆರವಾಗಿ!
ಮೋಹಿನಿಗೆ ಮರುಳಾಗಿ ಮೂರ್ಖ ದಾನವರೆಲ್ಲ
ತಮ್ಮ ಗೆಯ್ಮೆಯ ಪಾಲನನ್ಯರಿಗೆ ತೆತ್ತು
ಸತ್ತಂತೆ ಸಾಯದಿರಿ: ಸಂಸ್ಕೃತಿಯ ಹೆಸರಿಂದೆ
ಶ್ರೀಮಂತರೊಡ್ಡುವಾ ಬಲೆ ನಿಮಗೆ ಮೃತ್ಯು!

ಇಂದು ನೆತ್ತರು ಚೆಲ್ಲಿ ಮುಂದೆ ಬಹ ಮಕ್ಕಳಿಗೆ
ಹೊಟ್ಟೆಗನ್ನವ, ಮೈಗೆ ಬಟ್ಟೆಯನು ನೀಡಿ.
ಇಂದು ನೋವಾದರೂ ಇಂದು ಸಾವಾದರೂ
ಮುಂದೆ ಬಾಳಿಗೆ ಸೊಗಸು ನೆಮ್ಮದಿಯ ಮಾಡಿ.
ಇಂದು ನೀವೇಳದಿರೆ ಕೆಚ್ಚೆದೆಯ ತಾಳದಿರೆ
ನಿಮ್ಮವರ ಬಾಳು ಎಂದೆಂದಿಗೂ ಹೇಡಿ!
"ಇಂದು ರಕ್ತದ ಬಿಂದು ಮುಂದೆ ಸೌಖ್ಯದ ಸಿಂಧು!"[೧]
ಎಂದು ಸಾಹಸಕೇಳಿ, ಹಿಂಜರಿಯ ಬೇಡಿ!

---

## ರಕ್ತತರ್ಪಣ

ಸತ್ತವರ ಕರೆಯು, ಓ ಕೂಗುತಿದೆ, ಅದೊ ಕೇಳು,
ಭೂತಕಾಲದ ಗರ್ಭ ಗೋರಿಯಿಂದ;
ಆಲಿಸಿಯು ಅದನು ನೀ ಸುಮ್ಮನಿರುವೆಯ ಹೇಳು,
ದೇಶಮಾತೆಯು ಹಡೆದ ವೀರಕಂದಾ?

"ಏಳಿರೈ, ಸೋದರಿರ, ನಿಮಗಾಗಿ ಮಡಿದೆಮ್ಮ
ಮರೆಯದಿರಿ, ನಿಮ್ಮಣ್ಣ ತಮ್ಮದಿರನು.
ನಿಮ್ಮಂತೆ ನಾವಿದ್ದು ಉಸಿರೆಳೆದು ನಲಿದುಲಿದು
ಒಲಿದೊಲಿಸಿ ಬಾಳಿದೆವು; ಮೊನ್ನೆಮೊನ್ನೆ

ಸ್ವಾತಂತ್ರ್ಯ ಸಾಧನೆಗೆ ಸಂಗ್ರಾಮ ದೇವತೆಗೆ
 ರಕ್ತತರ್ಪಣವಿತ್ತು, ಎದೆಯ ಹರಿದು,
ಹೊರಳಿದೆವು ನೆಲಕೆ. ಓ ಉರುಳಿ ಬಿದ್ದೆವು ನೆಲಕೆ
 ಕೈಯ ಕತ್ತಿಯನೆಸೆದು ನಿಮ್ಮ ಕೈಗೆ,
ಮತ್ತೆ ಬಾವುಟವೆಸೆದು ನಿಮ್ಮ ರಕ್ಷೆಯ ವಶಕೆ,
 ಹಿಡಿದೆತ್ತಿ ಮುಂಬರಿವಿರೆಂದು ನಂಬಿ!
ಸತ್ತವರ ಆ ನಂಬುಗೆಗೆ ಎರಡನೆಣಿಸದಿರಿ,
 ಹಂದೆಯಾಗದೆ ಮುಂದೆ ನುಗ್ಗಿ ಹೋರಿ.
ಅಲ್ಲದಿರೆ ಸಾವಿನಲ್ಲಿಯು ಶಾಂತಿಯೆಮಗಿಲ್ಲ:
 ಅಲೆವ ಪ್ರೇತಗಳಾಗಿ ಕೂಗಿ ಚೀರಿ
ಕಾಡುವೆವು ನಿಮಗೆ ನಿದ್ದೆಯ ಕೊಡದೆ ಚಿರದಿನಂ
 ರಕ್ತತರ್ಪಣಕಾಗಿ ಗಂಟಲಾರಿ!
ತನಿಯೆರೆಯಿರೈ ನಿಮ್ಮ ಎದೆನೆತ್ತರನು ಬಸಿದು
 ಸ್ವಾತಂತ್ರ್ಯ ದೇವತೆಯ ತೃಷಿತ ಮುಖಕೆ.
ಇಂದು ಭಾರತಿ ಹಡೆದಳಲ್ತು ನಿಮ್ಮನು ಸುಖಕೆ;
 ಪಶುಗಳೈ ನೀವೆಲ್ಲರಮೃತ ಮುಖಕೆ!
"ಇರಲಿ ಹೂವಿನ ಮಾಲೆ, ಇರಲಿ ರೇಶ್ಮೆಯ ವಸನ,
 ಇರಲಿ ಮುತ್ತಿನ ಹಾರ! ಕೈಗತ್ತಿ ಬರಲಿ!
ಇರಲಿ ಹೊಸ ಹೆಣ್ಣು ಮದುವೆಯ ಸೊಗಸು ಶೃಂಗಾರ;
 ಬರಲಿ ಕಾರಾಗಾರ! ಮೃತ್ಯುವೈತರಲಿ!
ರಕ್ತ ಹೃದಯದ ಬಿಸಿಯ ರಕ್ತತರ್ಪಣವಿತ್ತು
 ತಣಿಸಿರೈ ಸತ್ತರಾ ಬಯಕೆ ತೆತ್ತು;
ಇಲ್ಲದಿರೆ ನಿಮಗಾಗಿ ಸತ್ತೆಮಗೆ ಸೊಗವಿಲ್ಲ,
 ಬದುಕಿರುವ ನಿಮಗುಮಾ ಬದುಕೆ ಮಿತ್ತು!"

ಇಂತು ಸತ್ತವರ ಕರೆ, ಓ, ಕೂಗುತಿದೆ, ಕೇಳು,
 ಭೂತಕಾಲದ ಗರ್ಭಗೋರಿಯಿಂದ;
ಆಲಿಸಿಯು ಅದನು ನೀ ಸುಮ್ಮನಿರುವೆಯ. ಹೇಳು,
 ದೇಶಮಾತೆಯು ಹಡೆದ ವೀರಕಂದಾ?

## ಸುಮುಹೂರ್ತವೊ ಇಂದೆ!

ಬೀಳಲಿ ಮೈ ನೆತ್ತರು ಕಾರಿ;
ಹೋದರೆ ಹೋಗಲಿ ತಲೆಹಾರಿ.
ತಾಯ್ನಾಡಿನ ಮೇಲ್ಮೆಗೆ ಹೋರಿ;
ಸ್ವಾತಂತ್ರ್ಯದ ಸ್ವರ್ಗಕೆ ಏರಿ!

ಸೋದರ ಸೋದರಿಯರೆ ಮೇಲೇಳಿ,
ಕರೆಯುತ್ತಿಹಳದೊ ರಣಕಾಳಿ.
ದೇಶಪ್ರೇಮಾವೇಶವ ತಾಳಿ,
ಖಳವೈರಿಯ ಸೀಳಿ!

ತ್ಯಾಗದ ಯಾಗಕೆ ನುಗ್ಗಿರಿ ಮುಂದೆ,
ಭೋಗದ ರೋಗವ ಬಿಡಿ ಹಿಂದೆ.
ತಡಮಾಡಿದರಮ್ಮನ ನೀಂ ಕೊಂದೆ!
ಸುಮುಹೂರ್ತವೊ ಇಂದೆ!

---

## ಭರತ ಭೂಮಿ ನನ್ನ ತಾಯಿ

ಭರತ ಭೂಮಿ ನನ್ನ ತಾಯಿ,
ನನ್ನ ಪೊರೆವ ತೊಟ್ಟಿಲು,
ಜೀವನವನೆ ದೇವಿಗೆರೆವೆ
ಬಿಡುತೆ ಗುಡಿಯ ಕಟ್ಟಲು.

ತುಹಿನ ಗಿರಿಯ ಸಿರಿಯ ಮುಡಿಯ
ಹಿರಿಯ ಕಡಲು ತೊಳೆಯುವಡಿಯ
ಪೈರು ಪಚ್ಚೆ ಪಸುರಿನುಡೆಯ
ಭರತ ಭೂಮಿ ನನ್ನ ತಾಯಿ,
ನನ್ನ ಪೊರೆವ ತೊಟ್ಟಿಲು.
ಜೀವನವನೆ ದೇವಿಗೆರೆವೆ
ಬಿಡುತೆ ಗುಡಿಯ ಕಟ್ಟಲು.

ಸಿಂಧು, ಯಮುನೆ, ದೇವಗಂಗೆ,
ತಪತಿ ಕೃಷ್ಣೆ ಭದ್ರೆ ತುಂಗೆ
ಸಲಿಲ ತೀರ್ಥ ಪುಣ್ಯರಂಗೆ
ಭರತ ಭೂಮಿ ನನ್ನ ತಾಯಿ
  ನನ್ನ ಹೊರೆವ ತೊಟ್ಟಿಲು.
ಜೀವನವನೆ ದೇವಿಗೆರೆವೆ
  ಬಿಡುತೆ ಗುಡಿಯ ಕಟ್ಟಲು.

ಮತದ ಬಿರುಕುಗಳನು ತೊರೆವೆ,
ನುಡಿಗಳೊಡಕುಗಳನು ಮರೆವೆ;
ತೊತ್ತು ತೊಡಕುಗಳನು ಬಿರಿವೆ;
ಜೀವನವನೆ ದೇವಿಗೆರೆವೆ
  ಬಿಡುತೆ ಗುಡಿಯ ಕಟ್ಟಲು.

ಭರತ ಭೂಮಿ ನನ್ನ ತಾಯಿ
  ನನ್ನ ಪೊರೆವ ತೊಟ್ಟಿಲು;
ಸ್ವಾತಂತ್ರ್ಯದ ಸ್ವರ್ಗಕೇರೆ
  ಪುಣ್ಯದೇಣಿ ಮೆಟ್ಟಲು!

---

## ಮೃತವಾಗಿಹೆಯಾ, ಚೀ, ಓ ಹೃದಯಾ!

  ಮೃತವಾಗಿಹೆಯಾ? ಚೀಃ, ಓ ಹೃದಯಾ!
ನೋಡದೊ! ಏಳೇಳಿಂದ್ರ ದಿಗಂತದಿ
ಸುಂದರ ಮಧುರ ಉಷಾ ಉದಯ!

  ಅರುಣನ ಮುತ್ತಿಗೆ ಉಷೆಯ ಕಪೋಲಂ
ಕೆಂಪೇರೆ,
ಕತ್ತಲ್ಗುರುಳಿನ ನೀಲಿಯ ಹಣೆಯಲಿ
ಬಾಡುತಲಿವೆ ತಾರೆ.
ಶ್ಯಾಮಲ ಕಾನನಮಯ ಗಿರಿಕಂದರಗಳ ಮಧ್ಯೆ
ಕಣ್ಬಿಡುತಿದೆ ನಿದ್ದೆ.

ನುಣ್ದನಿ ಬೀರಿರೆ ನೂರಿಂಚರ ಹಕ್ಕಿ
ಉದಯದ ಸುಖಸಾಗರ ತುಳುಕುತ್ತಿದೆ ತೆರೆಯುಕ್ಕಿ !

ನಿನ್ನಲಸತೆಯಾಗಲಿ ಬಾಡುವ ಚುಕ್ಕಿ !
ನಿನ್ನುಲ್ಲಸವಾಗಲಿ ಹಾಡುವ ಹಕ್ಕಿ !
ಕನಸೊಡೆದೇಳಲಿ ; ಹಿಮುಗಲ್ಲಾಗಿ
ನಿದ್ರಿಪ ಜೀವಂ ಜಾಡ್ಯವ ನೀಗಿ,
ಚಿಮ್ಮಲಿ ಚಿರಚೇತನ ರಸವುಕ್ಕಿ,
ಆನಂದದ ನಿರ್ಝರಿಣಿಯ ಜಲ ಧುಮ್ಮಿಕ್ಕಿ !

---

## ಸ್ವರ್ಗವೆಲ್ಲಿದೆ ?

ಸ್ವರ್ಗವೆಲ್ಲಿದೆ ?
ಸ್ವರ್ಗವೆಲ್ಲಿದೆ ?—
ಕಾಮಧೇನು, ಕಲ್ಪವೃಕ್ಷ,
ಕಾಮಿನಿಯರ ಪೀನವಕ್ಷ,
ಅಮೃತ ಗಂಗೆಯಮಿತ ಪಾನ,
ಅಪ್ಸರೆಯರ ಅಮರ ಗಾನ,
ನಂದನೋಽದ್ಯಾಽನಽ?—
ಇವುಗಳಿರುವ ಕಟ್ಟುಕತೆಯ
ಮುಗಿಲಿನಾಚೆಲೋಕದಲ್ಲಿ
ನಾಕವಿಲ್ಲಾ !
ನಾಕವಿಲ್ಲಾ !

ಸ್ವರ್ಗವೆಲ್ಲಿದೆ ?
ಸ್ವರ್ಗವೆಲ್ಲಿದೆ ?—
ಹೆರರ ಸುಖದಿ ಸುಖಿಸುವೆನ್ನ
ಸುಖದ ಹೃದಯಕಮಲ ಮಧ್ಯೆ

ಜೇನು ಹೊಳೆಯ ಮಿಂದು ತೇಲಿ
ನಾಕವಲ್ಲಿದೆ !
ನಾಕವಲ್ಲಿದೆ !

ಹಣ್ಣು ತಿನ್ನುತಿರಲು ಹಕ್ಕಿ
ಅದರ ಸುಖದ ರಸದಿ ಸಿಕ್ಕಿ
ನಲಿಯಲೆನ್ನ ಆತ್ಮವುಕ್ಕಿ
ಆ ನನ್ನ ನಲ್ಮೆಯಲ್ಲಿ
ನಾಕ ತಾನಿದೆ !
ನಾಕ ತಾನಿದೆ !

ಕಿಟಕಿಯೆಡೆಗೆ ಮುದುಕಿ ತಿರುಕಿ
ಬಂದು ನಿಂದು ತಿರುಪೆ ಬೇಡೆ,
ಕೊಡುವ ಕಾಸಿಗೆನಸೊ ಹರಸಿ
ನಡೆಯೆ, ಅವಳ ಸುಖಕೆ ಸುಖಿಸಿ
ಧನ್ಯವಾಗುವೆನ್ನ ಮನದಿ
ನಾಕ ಮೂಡಿದೆ !
ಮನೆಯ ಮಾಡಿದೆ !

ಒಲುಮೆ ಬರಲು ಕೈಯ ಚಾಚಿ
ಅದರ ಮೈಯ ತಬ್ಬಿ ಬಾಚಿ,
ಸ್ವಾರ್ಥತೆಯನೆ ತೇಲಿಬಿಟ್ಟು
ನನ್ನದೆಂಬುದೆಲ್ಲ ಕೊಟ್ಟು
ಅದರೊಳಾನು ಲೀನವಾಗಿ
ನನ್ನ ಮರೆಯೆ ಬರಿಯನಾಗಿ—
ಸ್ವರ್ಗವಲ್ಲಿದೆ !
ಸ್ವರ್ಗವಲ್ಲಿದೆ !
ಸ್ವರ್ಗವಲ್ಲಿದೆ !

# ಹಂಪೆಯ ಭೀಮ

ಕೋಟೆ ಹೆಬ್ಬಾಗಿಲಲಿ ಬಿಸುಸುಯ್ವನಿವನಾರು?
ಬಲ್ಗದೆಯ ಮೈಗಲಿಯು! ಭೀಮನೇನು?
ಕಂಬನಿಯ ಕರೆಯುತ್ತ ಮೂಕನಾಗೇಕಿಂತು
ನಿಂತಿರುವೆ, ಮಾರುತಿಯೆ? ಮಾತನಾಡು.
ಬೀರ, ಬೀರರ ಬೀರ, ಕಲ್ಲಾಗಿ ನೀನಿಂತು
ಹಾಳೂರ ಬಾಗಿಲನು ಕಾಯುತಿಹೆಯೇನು?
ಧರಣಿಪರು, ಮಂತ್ರಿಗಳು, ಸೈನಿಕರು, ಕಬ್ಬಿಗರು
ಬಿಟ್ಟಳಿದ ಪಾಳ್ಕೆಲವ ಕಾಯುತಿಹೆಯೇನು?
ಸೊನ್ನೆ ದಿಟ್ಟಿಯನಟ್ಟಿ ಶೂನ್ಯತರ ಶೂನ್ಯವನು
ಮನದಿ ಮರುಕುವನಾಂತು ನೆನೆವೆಯೇನು?
ನೀನು ಬಾಗಿಲ ಕಾಯುತಿರ್ದೊಡಂ ಹಂಪೆಯಿದು
ಮುಸಲರಿಂ ಹಸಿಮಸಣವಾದುದೇನು?
ನಿನ್ನಣ್ಣ ಹನುಮಂತನಿಲ್ಲಿರ್ದೊಡಂ ಬಂದು
ನಿನಗೆ ನೆರವಾಗಿದನು ಪೊರೆಯಲಿಲ್ಲೇನು?
ರನ್ನಪಂಪರ ಮಹಾಕಾವ್ಯರಸರಂಗದಲಿ
ಭಾರತದ ಕೊಳುಗುಳದಿ ನಿನ್ನ ನೋಡಿಹೆನು,
ಕಂಬನಿಯ ಕರೆವ ಭೀಮನನಲ್ಲಿ ಕಂಡಿಲ್ಲ;
ಜಯಮತ್ತ ರುದ್ರ ಮಾರುತಿಯ ಕಂಡೆ!
ನಮಿಸುವ ಹಿಮಾಲಯುವ ಕಂಡು ವಿಸ್ಮಿತನಾದೆ,
ಹಂಪೆಯಲಿ, ಭೀಮ, ನೀನಳುವುದನು ಕಂಡು!
ತಿರುಗುವೀ ಗದೆಯೇಕೆ ನಿಷ್ಪಂದವಾಗಿಹುದು?
ಮೈಮರೆತು ಗೋಳಿಡುತ ನೀನಾರ ನೆನೆವೆ?
ಇಲ್ಲಿಗೈತಹ ಯಾತ್ರಿಕರ ಎದೆಯ ಮೂಷೆಯಲಿ
ಹಾಳಾದ ಐಸಿರಿಯ ಕಿಚ್ಚ ಮರುಕೊಳಿಸು!
ಅಣಕಿಸೆಮ್ಮನು, ವೀರ; ಹೆಂಬೇಡಿಗಳು ನಾವು!
ನಿನ್ನ ಗದೆಯಾಘಾತದಿಂದೆಚ್ಚರುವೆವು!

ಹೇ ವೀರಮೂರ್ತಿಯೇ, ಹಂಪೆಯಿಾ ಮಸಣದಲಿ
ಭೈರವಾಶ್ರುವ ಚೆಲ್ಲಿ ಮೌನದಲಿ ನಿಲ್ಲು!
ಯಾತ್ರಿಕರ ಹೃದಯದಲಿ ಕೆಚ್ಚೂರಿ, ನೆಚ್ಚೂರಿ,
ಹೆಂಬೇಡಿಗಳನೆಲ್ಲ ನಿನ್ನೆಡೆಗೆ ಗೆಲ್ಲು!

---

## ಸಾಯುತಿದೆ ನಿಮ್ಮ ನುಡಿ, ಓ ಕನ್ನಡದ ಕಂದರಿರ!

ಸಾಯುತಿದೆ ನಿಮ್ಮ ನುಡಿ, ಓ ಕನ್ನಡದ ಕಂದರಿರ,
ಹೊರನುಡಿಯ ಹೊರೆಯಿಂದ ಕುಸಿದು ಕುಗ್ಗಿ!
ರಾಜನುಡಿಯೆಂದೊಂದು, ರಾಷ್ಟ್ರನುಡಿಯೆಂದೊಂದು,
ದೇವನುಡಿಯೆಂದೊಂದು ಹತ್ತಿ ಜಗ್ಗಿ
ನಿರಿನಿಟಿಲು ನಿಟಿಲೆಂದು ಮುದಿಮೂಳೆ ಮುರಿಯುತಿದೆ,
ಕನ್ನಡಮ್ಮನ ಬೆನ್ನು ಬಳುಕಿ ಬಗ್ಗಿ!
ಕೂಗಿಕೊಳ್ಳಲು ಕೂಡ ಬಲವಿಲ್ಲ: ಮಕ್ಕಳೇ
ಬಾಯ್ಮುಚ್ಚಿ ಹಿಡಿದಿಹರು ಕೆಲರು ನುಗ್ಗಿ!

ಮೊಲೆವಾಲಿನೊಡಗೂಡಿ ಬಂದ ನುಡಿ ತಾಯಿನುಡಿ;
ಕೊಲೆಗೈದರಮ್ಮನನೆ ಕೊಲಿಸಿದಂತೆ!
ತಾಯ್ ಮುತ್ತು ಕೊಡುವಂದು ನಿಮ್ಮ ಕೆನ್ನೆಯ ಮೇಲೆ
ಮೆರೆಯಿತದು ಪೋಣಿಸಿದ ಮುತ್ತಿನಂತೆ:
ನಿಮ್ಮ ನಲ್ಲೆಯರೊಡನೆ ನಲ್ನುಡಿಯ ನುಡಿವಂದು
ಕನ್ನಡವೆ ಕಲಿಸುವುದು ತುಟಿಗೆ ಬಂದು:
ನುಡಿವಂದು ನಿಮ್ಮ ಮುದ್ದಿನ ಹಸುಳೆಗಳನೆತ್ತಿ
ಕನ್ನಡವೆ ನಿಮಗೀವುದೊಲವ ತಂದು.

ಇರುವಲ್ಪ ಶಕ್ತಿಯನು ಇರುವಲ್ಪ ದ್ರವ್ಯವನು
ಪರಭಾಷೆ ಮೋಹಕ್ಕೆ ಚೆಲ್ಲಬೇಡಿ;
ಹೂಮಾಲೆ ಸೂಡುವೆವು ಕೊರಳಿಂಗೆ ಎಂದೆನುತೆ
ನೇಣುರುಳನೆಳೆದಯ್ಯೊ ಕೊಲ್ಲಬೇಡಿ.

ಪರಕೀಯರೆಲ್ಲರಾಶೀರ್ವಾದ ಕರವೆತ್ತಿ
ಹರಸುತ್ತ ಬರುವರೈ ಮೊದಲು ಮೊದಲು ;
ಕಡೆಗದುವೆ ಕುತ್ತಿಗೆಗೆ ಕರವಾಳವಾಗುವುದು :
ನಮ್ಮ ನಾಲಗೆ ನಮಗೆ ಕೀಳುತೊದಲು !

ನಿಮ್ಮ ನುಡಿ ನಿಮ್ಮ ಗಂಡಸುತನಕೆ ಹಿರಿಸಾಕ್ಷಿ;
ಗೆಲವಿದ್ದರದಕೆ ನಿಮಗಿಹುದು ಶಕ್ತಿ.
ನುಡಿ ಮಡಿದರೆಲ್ಲರೂ ಮೂಕ ಜಂತುಗಳಂತೆ ;
ಬಾಲವಲ್ಲಾಡಿಪುದೆ ಪರಮ ಭಕ್ತಿ !
ಉತ್ತರದ ಕಾಶಿಯಲಿ ಕತ್ತೆ ಮಿಂದೈತರಲು
ದಕ್ಷಿಣದ ದೇಶಕದು ಕುದುರೆಯಹುದೆ ?
ತಾಯಿತ್ತ ಮೊಲೆಹಾಲೆ ನಿಮ್ಮ ಮೈಗಾಗದಿರೆ
ಹೊತ್ತ ಹೊರೆ ಬಲಕಾರಿ ನೆತ್ತರಹುದೆ ?

ಕಣ್ದೆರೆಯಿರೇಳಿ, ಓ ಕನ್ನಡದ ಮಕ್ಕಳಿರ,
ಗರ್ಜಿಸುವುದನು ಕಲಿತು ಸಿಂಹವಾಗಿ !
ನಖದಂಷ್ಟ್ರ ಕೇಸರಂಗಳ ಬೆಳೆಸಿ ಹುರಿಗೊಂಡು
ಶಿರವೆತ್ತಿ ನಿಂತು ಕುರಿತನವ ನೀಗಿ.

---

## ಮೆಟ್ಟುವ ನೆಲ ಕರ್ನಾಟಕ

ಎಲ್ಲಾದರು ಇರು ; ಎಂತಾದರು ಇರು ;
ಎಂದೆಂದಿಗು ನೀ ಕನ್ನಡವಾಗಿರು.
ಕನ್ನಡ ಗೋವಿನ ಓ ಮುದ್ದಿನ ಕರು,
ಕನ್ನಡತನವೊಂದಿರೆ ನೀನಮ್ಮಗೆ ಕಲ್ಪತರು !

ನೀ ಮೆಟ್ಟುವ ನೆಲ—ಅದೆ ಕರ್ನಾಟಕ ;
ನೀನೇರುವ ಮಲೆ—ಸಹ್ಯಾದ್ರಿ.

ನೀ ಮುಟ್ಟುವ ಮರ—ಶ್ರೀಗಂಧದ ಮರ ;
ನೀ ಕುಡಿಯುವ ನೀರ್—ಕಾವೇರಿ.

ಪಂಪನನೋದುವ ನಿನ್ನಾ ನಾಲಗೆ
ಕನ್ನಡವೇ ಸತ್ಯ.
ಕುಮಾರವ್ಯಾಸನನಾಲಿಪ ಕಿವಿಯದು
ಕನ್ನಡವೇ ನಿತ್ಯ.
ಹರಿಹರ ರಾಘವರಿಗೆ ಎರಗುವ ಮನ,
ಹಾಳಾಗಿಹ ಹಂಪೆಗೆ ಕೊರಗುವ ಮನ,
ಪೆಂಪಿನ ಬನವಾಸಿಗೆ ಕರಗುವ ಮನ ;—
ಬೆಳ್ಗೊಳ ಬೇಲೂರ್ಗಳ ನೆನೆಯುವ ಮನ,
ಜೋಗದ ಜಲಪಾತದಿ ಧುಮುಕುವ ಮನ
ಮಲೆನಾಡಿಗೆ ಹೊಂಪುಳಿವೋಗುವ ಮನ ;—
ಕಾಜಾಣಕೆ ಗಿಳಿ ಕೋಗಿಲೆಯಿಂಪಿಗೆ,
ಮಲ್ಲಿಗೆ ಸಂಪಗೆ ಕೇದಗೆ ಸೊಂಪಿಗೆ,
ಮಾವಿನ ಹೊಂಗೆಯ ತಳಿರಿನ ತಂಪಿಗೆ
ರಸರೋಮಾಂಚನಗೊಳುವಾತನ ಮನ
ಎಲ್ಲಿದ್ದರೆ ಏನ್ ? ಎಂತಿದ್ದರೆ ಏನ್ ?
ಎಂದೆಂದಿಗು ತಾನ್—
ಕನ್ನಡವೇ ಸತ್ಯ !
ಕನ್ನಡವೇ ನಿತ್ಯ !
ಅನ್ಯವೆನಲದೆ ಮಿಥ್ಯಾ !

---

## ಶಿಲಾಭೇರಿ

ಕೂಗುತಿವೆ ಕಲ್ಲು :
ಕಿವಿವೆತ್ತ ಕಿವುಡರಿರ, ಕೇಳಿ ಆ ಸೊಲ್ಲು !
ನಮ್ಮ ನಾಡಿನ ಮೂಲೆ ಮೂಲೆಯ ವೀರಗಲ್ಲು,
ಮಾಸತಿಯ ಮೃದು ಕಠೋರದ ಚಾಗಸೊಲ್ಲು !

ಸತ್ತವರು ನಾವಲ್ಲ, ನೀವೆಂದು ಸಾರುತಿವೆ.
ಆಳಾಳ್ಗೆ ಕೈದೋರಿ ಮೌನಗಳೆ ದೂರುತಿವೆ:
“ನಮ್ಮಿಂದಿನಾ ಕೆಚ್ಚು
ನಮ್ಮಿಂದಿನಾ ನೆಚ್ಚು
ನಿಮ್ಮೊಳಿಂದುದ್ಭವಿಸಲಾ ದಿವ್ಯ ಹುಚ್ಚು!”
ಎಂದಣಕಿ ಚೀರುತಿವೆ
ಹರಸಿ ಹಾರುತಿವೆ.

ಪಾಳು ದೇಗುಲದಲ್ಲಿ, ಲಂಟಾನ ಪೊದೆಯಲ್ಲಿ,
ಕಲ್ಲುರುಳಿ ಮುರಿದರಳಿಕಟ್ಟೆ ಹಳು ಬೆಳೆದಲ್ಲಿ,
ಇಲ್ಲಿ ಏನಿಲ್ಲವೆಂದು
ಇಲ್ಲಿ ಯಾರಿಲ್ಲವೆಂದು
ಸಾಗುತಿರಲನಿರೀಕ್ಷಿತಂ ಪ್ರೇತವೊಂದು
ಕೂಗುವುದು ಹಾದಿ ಬದಿಯ
ಕದಡಿ ನೆಮ್ಮದಿಯ!

“ಕೇಳಿಲ್ಲಿ ಮಡಿದೆನಾಂ ಜೀವವನೆ ತೃಣಮಾಡಿ
ಹೆಣ್ತನದ ಮಾನರಕ್ಷಣೆಗಾಗಿ ಕಾದಾಡಿ!”
“ಇಲ್ಲಿ ನಾಂ ಬಲಿಯಾದೆ,
ಹೆಬ್ಬುಲಿಯೊಡನೆ ಕಾದೆ;
ತಬ್ಬಲಿತನವ ತಡೆದು ಕರುಗೆ ತಾಯ್ಪೋದೆ!”
“ಹಗೆಯಿರಿಯುತಿಲ್ಲಿ ಬಿದ್ದೆ;
ಮಿತ್ತುವನು ಗೆದ್ದೆ!”

ಇಲ್ಲಿ ದೇವರಿಗಾಗಿ, ಅಲ್ಲಿ ಹದಿಬದೆಗಾಗಿ,
ಇಲ್ಲಿ ಒಡೆಯನಿಗೊಡಲನಲ್ಲಿ ನಾಡಿಂಗಾಗಿ,
ಎಲ್ಲಿ ಕಣ್ಣಿಡಲಲ್ಲಿ,
ಎಲ್ಲಿ ಕಿವಿಯಿಡಲಲ್ಲಿ,
ಬಲಿದಾನಗೈದ ಕನ್ನಡತನದ ತುತ್ತೂರಿ
ಭೋರಿಡುತ್ತಿದೆ ಶಿಲಾಭೇರಿ,
ಪ್ರಾಣ ಸಂಚಾರಿ!

## ಕನ್ನಡಮ್ಮನ ಹರಕೆ

ಕನ್ನಡಕೆ ಹೋರಾಡು
  ಕನ್ನಡದ ಕಂದಾ ;
ಕನ್ನಡವ ಕಾಪಾಡು
  ನನ್ನ ಆನಂದಾ !
ಜೋಗುಳದ ಹರಕೆಯಿದು
  ಮರೆಯದಿರು, ಚಿನ್ನಾ ;
ಮರೆತೆಯಾದರೆ, ಅಯ್ಯೊ
  ಮರೆತಂತೆ ನನ್ನ !

ಮೊಲೆಯ ಹಾಲೆಂತಂತೆ
  ಸವಿಜೇನು ಬಾಯ್ಗೆ ;
ತಾಯಿಯಪ್ಪುಗೆಯಂತೆ
  ಬಲುಸೊಗಸು ಮೆಯ್ಗೆ ;
ಗುರುವಿನೊಳ್ನುಡಿಯಂತೆ
  ಶ್ರೇಯಸ್ಸು ಬಾಳ್ಗೆ ;
ತಾಯ್ನುಡಿಗೆ ದುಡಿದು ಮಡಿ,
  ಇಹಪರಗಳೇಳ್ಗೆ !

ರನ್ನ ಪಂಪರ ನಚ್ಚು
  ಕನ್ನಡದ ಸೊಲ್ಲು ;
ಬಸವ ದೇವನ ಮೆಚ್ಚು,
  ಹರಿಹರನ ಗೆಲ್ಲು ;
ನಾರಣಪ್ಪನ ಕೆಚ್ಚು
  ಬತ್ತಳಿಕೆ ಬಿಲ್ಲು ;
ಕನ್ನಡವ ಕೊಲುವ ಮುನ್
  ಓ ನನ್ನ ಕೊಲ್ಲು !

ನೆವವು ಏನಾದರೇನ್,
  ಹೊರನುಡಿಯು ಹೊರೆಯೈ !

ನಿನ್ನ ನಾಡೊಡೆಯ ನೀನ್;
ವೈರಿಯನು ತೊರೆಯ್ಯೆ!
ಕನ್ನಡದ ನಾಡಿನಲಿ
ಕನ್ನಡವ ಮೆರೆಯ್ಯೆ!
ತಾಯ್ಗಾಗಿ ಹೋರಾಡಿ
ತಾಯ್ನುಡಿಯ ಪೊರೆಯ್ಯೆ!

ಕನ್ನಡಕೆ ಬಂದಿಳಿಕೆ
ಹಿಡಿಯುತಿಹುದಿಂದು;
ನೀ ನಿದ್ದೆ ಮಾಡಿದರೆ
ಹಾಕುವುದು ಕೊಂದು!
ಎದ್ದೇಳೊ, ಕಂದಯ್ಯ,
ಕತ್ತಿಯನು ಕೊಳ್ಳೊ!
ತಳಿರು ವೇಷದ ರೋಗ
ಬಂದಿಳಿಕೆ, ತಳ್ಳೊ!

ದಮ್ಮಯ್ಯ, ಕಂದಯ್ಯ,
ಬೇಡುವೆನು ನಿನ್ನ;
ಕನ್ನಡಮ್ಮನ ಹರಕೆ,
ಮರೆಯದಿರು, ಚಿನ್ನಾ!
ಮರೆತೆಯಾದರೆ ಅಯ್ಯೊ,
ಮರೆತಂತೆ ನನ್ನ;
ಹೋರಾಡು ಕನ್ನಡಕೆ
ಕಲಿಯಾಗಿ, ರನ್ನಾ!

# ವೀರನ ಕನಿಕರ

(ನಾಯಿ—ನೆಪೋಲಿಯನ್)

ಕದನವು ಮುಗಿದಿತ್ತು ; ಜಯ ಕೈಸೇರಿತ್ತು ;
ರಕ್ತದ ರಣರಂಗಕೆ ಬೆಳ್ದಿಂಗಳು
ಹಾಲನು ಹೊಯ್ದಿತ್ತು ;
ರಾತ್ರಿಯ ನಿಶ್ಶಬ್ದತೆ ಮೆಯ್ಯಿಲ್ಲದ
ಶವದೊಲು ಬಿದ್ದಿತ್ತು !

ಶಿಬಿರದ ಹೊರಗಡೆ ದಳಪತಿಯೊಬ್ಬನೆ
ಕುಳಿತಿದ್ದನು ಚಿಂತೆಯೊಳದ್ದಿ ;
ಹೆಡೆಮುಚ್ಚಿದ್ದಿತು ಜ್ಯೋತ್ಸ್ನಾಮಂತ್ರದಿ
ವಿಜಿಗೀಷುಗೆ ಹಿಂಸಾಬುದ್ಧಿ.
ಭೀಷಣ ರಣದೊಳು ಗೆಲ್ದಾ ಕಣದೊಳು
ತನ್ನವರನ್ಯರ ಸೈನಿಕ ಶವಗಳು
ಬಿದ್ದಿದ್ದುವು ರಾಶಿಯೆ ರಾಶಿ ;
ನರಳಿದ್ದಿತು ಮೆಲುಗಾಳಿಯು ಸುಯ್ಯನೆ
ಹೆಣಗಳ ಕೊಳೆಗಂಪನು ಮೂಸಿ !

ಕಣ್ಣೆವೆಯಿಕ್ಕದೆ ಚಿಂತಿಸುತಿದ್ದಾ
ಸೇನಾನಿಯು ಕಂಡನದೇನು ?
ಪ್ರಾಣವಿಹೀನತೆ ಮೈವೆತ್ತಾಯೆಡೆ
ಚಲಿಸುತ್ತಿದೆ ! ಪ್ರಾಣಿಯು ಏನು ?
ನೋಡಿದರಲ್ಲೊಂದಿದೆ ಬಡನಾಯಿ !
ಏಂ ಗೈಯುತ್ತಿದೆ ಆ ಬಡನಾಯಿ ?
ಮಡಿದೊಬ್ಬಾಳಿನ ಹೆಣದೆಡೆ ನಿಂತು
ಮೌನದಿ ದುಃಖವ ತೋಡಿತ್ತು ;
ಕದನದಿ ಕೆಡೆದಾ ತನ್ನಾ ಸ್ವಾಮಿಗೆ
ಪ್ರೀತಿಯ ಮುಡಿಪನು ನೀಡಿತ್ತು.

ದೂರದಿ ದಳಪತಿಯಿರಲದ ಕಂಡು
ಮೆಲ್ಲನೆ ನಾಯಾತನ ಬಳಿ ಹೋಯ್ತು,
‘ ಬದುಕಿಸು ನನ್ನೊಡೆಯನ ದಮ್ಮಯ್ಯ’
ಎಂಬೊಲು ದಳವಾಯಿಯ ನೋಡಿತ್ತು :
ನೋಡುತ ಮುಖವನೆ ಸುಮ್ಮನೆ ನಿಂತಿರೆ
ನಾಯಿಯ ಕಣ್ ದೇವರ ಕಣ್ಣಾಯ್ತು !

ವಿಜಯಿ ನೆಪ್ಪೋಲಿಯನ್ ನೋಡುತ್ತಿರೆಯಿರೆ
ನರದೃಷ್ಟಿಗೆ ಮೃಗದೃಷ್ಟಿಯು ಸೇರಿರೆ
ಗೋಚರಿಸಿತ್ತಾ ಪಕ್ಷದಿ ನೀತಿ,
ನಾಯಿಯ ಹೃದಯದ ಸ್ವಾಮಿಪ್ರೀತಿ :
ದಳಪತಿಯಲಿ ಸಂಚರಿಸಿತು ಒಡನೆಯೆ
  ಆವುದೊ ಭಯವಲ್ಲದ ಭೀತಿ !

ಬಡನಾಯಿಯು ತುಸು ಹೊತ್ತಿನವೊಳಗೆ
ಹಿಂತಿರುಗಿತು ತನ್ನೊಡೆಯನ ಬಳಿಗೆ ;
ನಾಲಗೆಯಿಂದಾ ಶವವನು ತೀಡಿ
ಮತ್ತೆ ಮತ್ತೆ ದಳಪತಿಯನು ನೋಡಿ
  ಕಡೆಗಾಕಾಶಕೆ ಮೊಗಮಾಡಿ
ಪಳಯಿಸತೊಡಗಿತು ಸದ್ದಿಲಿಯಿರುಳನು
  ನಿಡುರೋದನದಲಿ ಕಡೆದಾಡಿ !

ಸಾವಿರ ಸಮರವ ಗೆಲಿದಾ ದಳಪತಿ-
ಪಡೆಪಡೆಗಳನೇ ಕೊಲಿಸಿದ ದಳಪತಿ
ಲಕ್ಷಲಕ್ಷ ನರರಳಲನು ಕೇಳಿ
ಕಲ್ಲಾಗಿದ್ದೆದೆ ಮರುಕುವ ತಾಳಿ-
  ಅತ್ತನು ನಾಯಿಯ ಕ್ಷಮೆಬೇಡಿ ;
ನೆತ್ತರ ಕಾಲುವೆ ಹರಿಸಿದ ತಪ್ಪಿಗೆ
  ಕಣ್ಣೀರ್ ಗಂಗೆಯೊಳಳ್ದಾಡಿ !

ಬಡ ನಾಯಿಯು ಗೋಳೆಂದಳುತಿತ್ತು ;
ಮಡಿದೊಡೆಯಗೆ ಕಣ್ಣೀರಿಡುತಿತ್ತು.
ವಿಜಯಿ ನೆಪೋಲಿಯನ್ ಮರುಕದಿ ಕರಗಿ
ಶಿಬಿರಕೆ ನಡೆದೈತಂದನು ತಿರುಗಿ :
ಕೈಯಲ್ಲಿದ್ದುದು ತುಂಬಿದ ಕೋವಿ !
ಒರಲುವ ನಾಯಿಗೆ ಗುರಿಯಿಟ್ಟೋವಿ
ಕುದುರೆಯನೆಳೆದನು ಬಿಲ್ಲೊತ್ತಿ ;
ಥಮ್ಮೆಂದೊಡನೆಯೆ ಮಲಗಿತು ನಾಯಿ
ಒಡೆಯನ ಒಡಲಿಗೆ ಮೈಯೊತ್ತಿ !

---

## ಸರ್ವವ್ಯಾಪಿ ಮೇಘರಾಹು ರವಿಯು ನುಂಗಿದೆ

ಸರ್ವವ್ಯಾಪಿ ಮೇಘರಾಹು
ರವಿಯು ನುಂಗಿದೆ ;
ಬಿಸಿಲ ಬೇಗೆ ಹಿಂಗಿದೆ.
ಭೀಮ, ದೀರ್ಘ, ವ್ಯೋಮಚುಂಬಿ,
ವರ್ಷಸ್ನಾತ, ಚಿರ ಶ್ಯಾಮ
ಗಿರಿ ಅರಣ್ಯ ಶ್ರೇಣಿ ಶ್ರೇಣಿ
ಶ್ರೇಣಿ ಹಬ್ಬಿದೆ ;
ಮಬ್ಬು ಹಿಡಿದು ತಬ್ಬಿದೆ !
ಸಿಡಿಲ ನಿದ್ರೆಯಂತೆ ಮೌನ
ಭೀಷ್ಮವಾಗಿದೆ ;
ನಿಶ್ಚಲತಾ ನೀರವತಾ
ಗ್ರೀಷ್ಮವಾಗಿದೆ :
ಪಕ್ಷಿಗಾನ ಸೆಡೆತಿದೆ ;
ವೃಕ್ಷ ಚಲನೆಯುಡುಗಿದೆ ;
ಬರೆದ ವರ್ಣಚಿತ್ರದಂತೆ
ಜಗತ್ ಮೂಕವಾಗಿದೆ ;

ಲೋಕನಯನಕಶ್ರುಪೂರ್ಣ
ಮಹತ್ ಶೋಕವಾಗಿದೆ ;
ಕರ್ಮಹೀನ ಕವಿಯ ಮನಕೆ
ಲಸತ್ ನಾಕವಾಗಿದೆ !

---

## ರೈಲ್ ರಸ್ತೆ

ಬೇಸಗೆಯ ಬಿಸಿಲು ಸುಡುತಿಹುದು ಸುಡುಸುಡನೆ ;
ಮೂರ್ಛೆ ಹೋಗಿದೆ ಭೂಮಿ ನಡುಗಿ ನಡನಡನೆ !
ಹರಿಯುತಿದೆ ಬಯಲಿನಲಿ ಕಂಬಿ ದಾರಿ
ಕರ್ಕಶದ ಕಟುನೀಲ ಕಾಂತಿಯನು ಕಣ್ಗೆ ಕಾರಿ :
ದೂರ, ಸಮದೂರವಾಗಿ,
ದಿಙ್ಮಾಲೆಯಿಂ ಬಂದು ದಿಙ್ಮಾಲೆಗಾಗಿ
ವೇಗದಿಂದೋಡುತಿರುವೆರಡು ಕಾಳಾಹಿಗಳ ಹೋಲಿ ;
ನೂತ್ನನಾಗರಿಕತೆಯ ಯಂತ್ರಾಸ್ಥಿಪಂಜರದಿ
ಕಬ್ಬಿಣದ ಹೃದಯಕ್ಕೆ ಹೊತ್ತು ರಕ್ತವ ಭರದಿ
ಪ್ರವಹಿಸುವ ಲೌಹ ರೇಖಾ ನಾಳಗಳ ಹೋಲಿ ;
ಕರ್ಕಶದ ಕಟುನೀಲ ಕಾಂತಿಯನು ಕಣ್ಗೆ ಕಾರಿ
ಹರಿಯುತಿದೆ ಕಂಬಿದಾರಿ !

ಬಡಕಲಾಗಿಹ ಹಸುವು ಬರಿಬಯಲ ಮೇಯುತಿದೆ ;
ತನ್ನ ನೆಳಲೂ ತನಗೆ ಕಾವಾಗಿ ಸಾಯುತಿದೆ !
ಎಲೆಯಿಲ್ಲದಾ ಮರವೊ ಮಳೆಯ ಹಾರೈಸುತಿದೆ ;
ಅದರ ನೆಳಲೆಲುಬುಗೂಡನೆ ಬಿಸಿಲು ದಹಿಸುತಿದೆ !
ಶಬ್ದ ನಿಶ್ಶಬ್ದವಾಗಿದೆ ಮಹಾ ಶೂನ್ಯತೆಯ ಶವದಂತೆ,
ವೈಶಾಖರುದ್ರನ ಸಮಾಧಿಯಂತೆ !
ಯಾವುದನು ಲೆಕ್ಕಿಸದೆ ಕಂಬಿದಾರಿ
ಬಿಸಿಲ ಝಳದಲಿ ಇನಿತು ಕಂಪನವ ತೋರಿ

ಕರ್ಕಶದ ಕಟುನೀಲ ಕಾಂತಿಯನು ಕಣ್ಗೆ ಕಾರಿ,
ಹರಿಯುತಿದೆ ರೈಲುದಾರಿ !

ನೋಡುತಿಹುದಿದ್ದಕಿದ್ದಂತೆ ಹಸು ಕೊರಳನೆತ್ತಿ :
ತನ್ನ ಸದ್ದನೆ ತಾನು ಬಿಡದೆ ಬೆಂಬತ್ತಿ
ಬಂದಿತದೊ ನಾಗರಿಕತೆಯು ಮಾರಿ ಬೋರೆ ಹತ್ತಿ !
ರೈಲು ಬಂದಿತು, ರೈಲು !
ಜಾಗರಿತವಾಗುತಿದೆ ಪ್ರಜ್ಞೆಯಿಲ್ಲದ ಬೈಲು !

ಕರಿಯ ತಲೆ, ಗಾಜುಗಣ್ಣು ;
ಬಾಯಲ್ಲಿ ಹೊಗೆ, ಮೂಗಿನಲ್ಲಿ ಕಿಡಿ, 'ರೈಲಿನೆಂಜಿಣ್ಣು' !
ಹರಿಯುತಿದೆ ಗಡಗಡನೆ ಸದ್ದುಮಾಡಿ
ದೊಡ್ಡದೊಂದೊನಕೆ ಹುಳು ! ಹೊಟ್ಟೆಯೆಲ್ಲಾ ಗಾಡಿ !
ಸಿಳ್ಳು ಹಾಕುತಿದೆ ; ಕಿಡಿಯ ಸೂಸುತಿದೆ ;
ಹೊಗೆಯನೂದುತಿದೆ ; ನುಗ್ಗಿಯೋಡುತಿದೆ !
ಜನರು ಕೂತಿಹರೇನು ?
ಸಾಗುತಿಹವೇನು ಸಾಮಾನು ?
ಅಲ್ಲ ; ರೈಲೋಡುತಿದೆ !
ಮಾನವರೊ ? ಸಾಮಾನೊ ? ಏನಾದರೇನಂತೆ ?
ಯಂತ್ರಕೇಕಾ ಚಿಂತೆ ? ಅಂತು ರೈಲೋಡುತಿದೆ !

ಸದ್ದು ಸತ್ತಿತು ; ಕಣ್ಣುಮರೆಯಾಯ್ತು ರೈಲು ;
ಪ್ರಜ್ಞೆ ತಪ್ಪಿದೆ ಮತ್ತೆ ಬಿಸಿಲಿನಲಿ ಬೈಲು !
ಏನೊಂದು ಕ್ಷಣಕಾಲದಲಿ ಮಿಂಚಿ ಮರೆಯಾಯ್ತು ;
ಬಯಲ ನಿದ್ದೆಯು ಕಂಡ ಕೆಟ್ಟ ಕನಸಾಯ್ತು !
ಹಾ ! ಕತ್ತರಿಸಿದೊಂದು ನರವೆ ಸಾಕು
ನೆತ್ತರಲಿ ಶೋಷಿಸಲು ! ಇನ್ನೇನು ಬೇಕು ?
ಈ ಕಬ್ಬಿಣದ ಕಂಬಿದಾರಿ
ಅಲ್ಲಿ ಮೇಯುವ ದನದ ರಕ್ತವನು ದಿನದಿನವು ಹೀರಿ

ಕೊಂಡೊಯ್ವ ನಾಗರಿಕತೆಯ ನಾಡಿ,
ಎನಲು ನಂಬುವರಾರು ? ಆದರೂ ನಂಬದಿರಬೇಡಿ !

ಸದ್ದು ಸತ್ತಿದೆ ! ಎಲ್ಲಿ ಹೋಯ್ತೊ ಏನೋ ರೈಲು ?
ಮೂರ್ಛೆ ಹೋಗಿದೆ ಮತ್ತೆ ಬಿಸಿಲಿನಲಿ ಬೋಳು ಬೈಲು !
ಕರ್ಕಶದ ಕಟುನೀಲ ಕಾಂತಿಯನು ಕಣ್ಗೆ ಕಾರಿ,
ಹರಿಯುತಿದೆ, ಹರಿಯುತಿದೆ, ಹರಿಯುತಿದೆ ರೈಲುದಾರಿ,
ಕಂಪಿಸುವ ಕಬ್ಬಿಣದ ಕಂಬಿದಾರಿ !

---

## ಕೂಸಿನ ಕನಸು

ಕಲ್ಪಾಂತರಗಳ ಸಂಕ್ಷಿಪ್ತಾಕೃತಿ,
ಜಗಶಿಲ್ಪಿಯ ಯುಗಯುಗ ಕರ್ಮದ ಕೃತಿ,
ಶತಮಾನಂಗಳ ಸಂಗ್ರಹ ಸಂಸ್ಕೃತಿ :
ಮಲಗಿದೆ ನವಶಿಶು ತೊಟ್ಟಿಲಲಿ !
ಮಲೆನಾಡಿನ ಬನಬೆಟ್ಟದ ಮೇಲೆ
ಹೊಮ್ಮಲು ಹೊಸ ಹೊಂಗದಿರನ ಲೀಲೆ
ಮೆರೆದಪುದಿಂತೆಯೆ ಇಬ್ಬನಿ ಬಾಲೆ
ಹೂವೆಸಳಿನ ಹೊಂಬಟ್ಟಲಲಿ !

ಜೋಗುಳದಿಂಪಿಗೆ ತೊಟ್ಟಿಲು ತೂಗಿ
ಹಸುಳೆಯು ಮಲಗಲು ಮೇಲ್ಗಡೆ ಬಾಗಿ
ಸರ್ವೇಂದ್ರಿಯವೂ ಕಣ್ಣೊಂದಾಗಿ
ದಿಟ್ಟಿಸುವಳು ಚೊಚ್ಚಲು ತಾಯಿ !
ಹಸುರಂಗಿಯ ಮೊಗ್ಗೆಯ ಮೈಮುಚ್ಚಿ
ತುದಿ ಮೊಗದಾ ಹೊಮ್ಮೊನೆಯನೆ ಬಿಚ್ಚಿ
ಮೆರೆವೊಲೆ, ಹಸಿಹೊದಿಕೆಯ ಮೈ ಹೊಚ್ಚಿ
ಮೆರೆದಿದೆ ಮಗುಮೊಗದಿನಿವಾಯಿ !

ತನ್ನಾ ಕನ್ಯಾಪ್ರಣಯದ ರೀತಿ
ಪ್ರಥಮಾಲಿಂಗನ ಚುಂಬನ ಭೀತಿ
ಫಲಿತ ವಿವಾಹದ ಸುಸ್ಥಿರ ಪ್ರೀತಿ
ಪ್ರತಿಫಲಿಸಿರೆ ಶಿಶು ವದನದಲಿ,
ಚೆಲ್ವಿನ ಬೇಟದ ಚಿನ್ನದ ಚಿಂತೆ
ಹೊಂಗನಸಿನ ಹೂದೋಂಟದ ಸಂತೆ
ರೂಪಂ ಬಡೆದುದೆ ದಿಟವೆಂಬಂತೆ,
ಪೆಣ್ಣಾಳ್ದಳು ರಸ ಸದನದಲಿ!

ನಂದನವಾಗಿರೆ ಮಾತೆಯ ಮನಸು
ಬೇರೊಂದಾಗಿದೆ ಕಂದನ ಕನಸು:
ಯುಗ ಯುಗ ಕೋಟಿಯ ಬಾಳ್ಗಳ ಕಣಸು
ಪುನರಭಿನಯಿಸಿಹುದಾತ್ಮದಲಿ!
ತಿಲಮಾತ್ರವೊ ಎಂಬಾ ಪ್ರಿಯಗಾತ್ರದಿ,
ನೇತ್ರ ಸುಸೂಕ್ಷ್ಮದ ಕೋಮಲಪಾತ್ರದಿ,
ನಾಟಕವಾಡಿದೆ ಸ್ವಪ್ನದ ಸೂತ್ರದಿ
ಪ್ರಪ್ರಾಚೀನತೆ ನೂತ್ನದಲಿ!

ಆಕೃತಿಗಳ್ಗಾಕಾರವೆ ಇಲ್ಲ;
ಅರ್ಥಾನರ್ಥದ ಸ್ಪಷ್ಟತೆಯಿಲ್ಲ.
ಪಸುಳೆಯ ಮೊದಲನೆ ತೊದಲಂತೆಲ್ಲ
ಅರ್ಥದ ಮೆಚ್ಚಿಲ್ಲದ ಕೆಚ್ಚು!
ಪ್ರಳಯ ಸೃಷ್ಟಿಗಳ ಪ್ರಥಮದ ರತಿಯೋ?
ಕಾಲದೇಶಗಳ ಭ್ರೂಣ ಸ್ಥಿತಿಯೋ?
ಅಸ್ತಿತ್ವಕೆ ಹಿಡಿಯುತ್ತಿಹ ಮತಿಯೋ:
ಅರ್ಥಾವಶ್ಯಕತೆಯ ಹುಚ್ಚು?

ಹೇಳುವರಾರಂತೂ ಸಿಸುಗನಸಲಿ,
ಇನ್ನೂ ಮನಸಲ್ಲದ ಆ ಮನಸಲಿ,

ಸೃಷ್ಟಿಯ ಕಂಕಾಲದ ತಾಂಡವ ಕಲಿ
ಪ್ರೇತದವೋಲೊಯ್ಯನೆ ಮೂಡಿ
ಪ್ರಲಯಾಗ್ನಿಯ ಕೇಸುರಿ ಜಡೆಗಳವೋಲ್,
ಕಂಗೆಟ್ಟಲೆಯುವ ಮುನ್ನೀರ್ಗಳವೋಲ್,
ಮೇಲ್ವಾಯುವ ಹೊಗೆ ಮುಗಿಲ್ಬಂಡೆಗಳೋಲ್
ಕುಣಿವನು ಭೂತಾಟವನಾಡಿ!

ಹಸುಳೆಗೆ ಭಯವೇನದೊ ಭ್ರೂಭಂಗ?
ಕಂಪಿಸುತಿದೆ ಸುಮಕೋಮಲ ಅಂಗ:
ಪ್ರಲಯ ಸೃಷ್ಟಿ ತಾಂಡವಕದು ರಂಗ!—
ಕಾರಣವರಿಯದೆ ಆ ಮಾತೆ
'ನಿದ್ದೆಯೊಳೇತಕೊ ಮಗು ಕುಮುಟುತ್ತಿದೆ;
ದುಃಸ್ವಪ್ನಕೆ ಹುಬ್ಬನು ಸೆಡೆಯುತ್ತಿದೆ;
ಒಳಿತಾಗಲಿ, ಶಿವ, ಪುಣ್ಯಂ ಬತ್ತದೆ!'
ಎಂಬಳು ಪ್ರೇಮಾಕುಲ ಭೀತೆ!

ತಾರಾ ಗರ್ಭಿಣಿಯಾಗಿಹ ಸೃಷ್ಟಿ;
ನಕ್ಷತ್ರ ಪ್ರಸವದ ಸಂತುಷ್ಟಿ;
ಗ್ರಹ ನಿರ್ಮಾಣದ ವರ್ತುಲ ವೃಷ್ಟಿ;
ಮೇಣ್ ಪ್ರಾಣೋದಯದಾನಂದ;
ಸ್ಥಲಜಲ ಸಸ್ಯದ ಪ್ರಾದುರ್ಭಾವ;
ಪ್ರಥಮ ರಚನೆಗಳ ಕಾವ್ಯಾಭಾವ;
ಜನ್ಮಾಂತರ ಸಂಸ್ಕಾರ ಪ್ರಭಾವ:
ಶಿಶು ಸ್ವಪ್ನದ ರಚನಾ ಬಂಧ!

ಕರ್ಬುದ ವಿಶ್ವಗಳವಶಂ ಬಿದ್ದಿವೆ;
ಅರ್ಬುದ ತಾರೆಗಳಕ್ಷರ ತಿದ್ದಿವೆ;
ಅರ್ಭಕ ಹೃದಯದಿ ಕುದಿಕುದಿದೆದ್ದಿವೆ
ಪೂರ್ವಾದ್ಭುತ ಜನ್ಮ ಸ್ಮರಣೆ!

ಬಹುಶಃ ಪ್ರಥಮ ಸಮುದ್ರದ ಬಾಳೋ?
ಬಹುಶಃ ಭೀಷಣ ವ್ಯಾಳದ ಗೋಳೋ?
ಮೀನಿನ, ಹಕ್ಕಿಯ, ಮಂಗನ ಪಾಳೋ?
  ಮೇಣ್ ಸಂಮಿಶ್ರವೊ ಆ ಸ್ಮರಣೆ?

ಅಥವಾ ವಿಜ್ಞಾನ ನಿಸರ್ಗಕ್ಕೆ
ಗೋಚರವಾಗದ ಆ ಸ್ವರ್ಗಕ್ಕೆ,
ಪರಮ ಪರಾತ್ಮದ ಸಂಸರ್ಗಕ್ಕೆ,
  ಕೂಸಿನ ಕನಸೇರಿಹುದೇನೊ!
ಅಥವಾ ಮುಂದಣ ದುಃಖಕೊ ಸುಖಕೋ?
ಪ್ರಕೃತಿಯ ಶೋಣಿತ ಶೋಷಕ ನಖಕೋ?
ಅಥವಾ ಚುಂಬಿಪ ಸುಂದರ ಮುಖಕೋ?
  ಅಥವಾ—ಯಾವುದಕೋ ಏನೋ?

ಹಸುಗೂಸಿನ ಕನಸದು ಬಲು ಆಳ:
ಅದಕಿಲ್ಲವು ಆದ್ಯಂತ್ಯದ ಕಾಲ!
ಕಿರುಕವನದೊಳಿರಲಾರದೆ, ಹೇಳ,
  ಗಾನದ ಕೊನೆಗಾಣದ ಅರ್ಥ?
ಕಡೆಜಾವದ ಇರುಳಿನ ತೊಡೆಮೇಲೆ
ಮೂಡುವ ಉಷೆಯ ನಿಮಿಾಲಿತದೋಲೆ
ಶಿಶು ಮಲಗಿರೆ, ಕಾವ್ ಕೂತಿದೆ ಮೇಲೆ
  ಮಾತೃಪ್ರೇಮದ ನಿಃಸ್ವಾರ್ಥ.

---

## ಸಾಯುವ ಸಂದೇಹವಾದಿ*

ಮೆಲ್ಲಮೆಲ್ಲಗೆ ಜೀವ ನದಿ ಬತ್ತುತಿದೆ, ತರುಣಿ;
  ನನ್ನ ಮುಖವಿರಿಸು ನಿನ್ನೆದೆಯ ತೊಟ್ಟಿಲಲಿ.
ಸವಿಸುಖದ ಹಗಲು ಕಳೆಯಿತು, ಮುಳುಗಿದನು ತ್ರರಣಿ;
  ರಾತ್ರಿ ಬಂದಿಹುದೀಗ ನಿದ್ದೆ ಬೇಕೆನಗೆ.

ಆ ಬಿಸಿಲು ಬೆಳಕುಗಳು ಮಾಯುವಾಗಿವೆ, ನಲ್ಲೆ ;
ಜೀವನದ ಕುಸುಮಗಳು ಬೇಗನುದುರುತಿವೆ.
ಏಕೆ ಬಂದೆವೊ ಇಲ್ಲಿ? ಒಂದೆರಡು ದಿನದಲ್ಲೆ
ಮತ್ತೇಕೆ ಮರಳುವೆವೊ? ನಾನೊಂದನರಿಯೆ !

ಒಂದು ಮಿಂಚಿನ ಗುಳ್ಳೆ, ಸುಖದುಃಖಕೆಚ್ಚತ್ತು
ಕುಣಿಯುವೆವು ; ಬಂದೆಡೆಗೆ ಸಂದಪೆವು ಮತ್ತೆ ;
ಏಕೆಂಬುದನು ಹೇಳಲಿಲ್ಲೊಂದು ದನಿ ; ಮತ್ತು
ಲೀಲೆಯುದ್ದೇಶವನು ತೋರುವರ ಕಾಣೆ.

ನಾನೇರಲಿರುವಾ ಕತ್ತಲೆಯ ಲೋಕದಲಿ
ನಾಳೆ ನನಗಾವ ಗತಿ ಕಾದುಕೊಂಡಿದೆಯೋ ?
ನಾವಿಲ್ಲಿ ತಿಳಿಯಲೆಳಸಿದುದೆಲ್ಲ ನಮಗಲ್ಲಿ
ತಿಳಿದರ್ಥಸಹಿತವಾಗುವುದೊ ತಪ್ಪುವುದೋ ?

ಮರಣವೆಂಬುದು ಬರಿಯ ಹಿರಿನಿದ್ದೆ ಮಾತ್ರವೆನೆ
ಆ ನಿದ್ದೆಯಿಂದೆಂದೂ ಕಣ್ದೆರೆಯದಿಹೆವೋ ?
ಮುನ್ನೆಲ್ಲರೂ ಹಿಡಿದ ಆ ಪಥದ ಸೂತ್ರವನೆ
ನಾ ಹಿಡಿವೆನಲ್ತೆ ?—ಏನಾದರೇನಂತೆ !

ಮಾನವರ ಮಕ್ಕಳಲಿ ಸುಜ್ಞಾನ ಮೂರ್ತಿಗಳು,
ಪುಣ್ಯವಂತರು, ಸಾಧುಸಂತರೆಂಬುವರು,
ಕೋಟಿಗಟ್ಟಲೆ ತೆರಳಿದಜ್ಞಾತ ಜೀವಿಗಳು
ಎಲ್ಲರಾ ಹಾದಿಯನೆ ಬಿಡದೆ ಹಿಡಿದಿಹರು.

ಹಾ ! ನನ್ನನೆದೆಗಪ್ಪು ; ಬೆಳಕು ಕತ್ತಲೆಯಾಯ್ತು ;
ಮೃತ್ಯುಶೀತಲಹಸ್ತವೆದೆಯ ಕೊರೆಯುತಿದೆ.
ಹಗಲು ವಿಶ್ರಾಂತಿಯಿಲ್ಲದೆ ದುಡಿದು ಸಾಕಾಯ್ತು ;
ಇನ್ನಿರುಳು ಬರೆ ಮಲಗಲಂಜಿಕೆಯದೇಕೆ ?

* J. Stark Browne ಅವರು ಸಾಯುವ ಮೊದಲು ರಚಿಸಿದ ಕವನದ ಭಾಷಾಂತರ.

# ನಾಸ್ತಿಕನ ಪ್ರೇಮಭಿಕ್ಷೆ

ಬಾ ಮುತ್ತುಕೊಡು ನನ್ನನಪ್ಪಿ, ಓ ಚೆಲುವೆ,
ಬಾಳು ಸಾಯಲು ಹೆಚ್ಚು ಹೊತ್ತಿಲ್ಲವಂತೆ. ಈ
ಬಾಳಳಿದ ಮೇಲೆ ಮುಂದಿನ ಬಾಳು ದಿಟವಲ್ಲ;
ಸಂದಿಗ್ಧವಂತೆ: ರವಿ ಚಣಚಣಕೆ ಬಿಸಿಗಳೆದು
ತಣ್ಣಗಾಗುತ್ತಿರುವನಂತೆ; ಧರೆ ರವಿಯಿಂದೆ
ದೂರ ದೂರಕೆ ಹರಿದು ತಣ್ಣಗಾಗಲು ಹೆಚ್ಚು
ಹೊತ್ತಿಲ್ಲವಂತೆ; ಈ ಜೀವರಾಶಿಗಳೆಲ್ಲ
ನಿರ್ನಾಮವಾಗುತಿವೆಯಂತೆ; ಆ ನಕ್ಷತ್ರ
ನೀಹಾರಿಕಾ ರಾಜಿಯೆಲ್ಲ ತುದಿಯಲಿ ಬಿಸುಪು
ಲವಲೇಶವಿಲ್ಲದೆಯೆ, ಬ್ರಹ್ಮಾಂಡವೆಲ್ಲವೂ
ಕಗ್ಗತ್ತಲೆಯ ಗೋರಿಯೊಳಗೆ ನುಗ್ಗುವುದಂತೆ;
ಪೂಜೆ ಪ್ರಾರ್ಥನೆ ವ್ಯರ್ಥವಂತೆ; ಏಕೆನೆ, ಪೂಜೆ
ಪ್ರಾರ್ಥನೆಯ ಕೇಳಿ ಕೃಪೆಮಾಡುವಾ ದೇವರೇ
ಗೈರು ಹಾಜರಿಯಂತೆ, ಮೇಣ್ ಮೊಲದ ಕೊಂಬಂತೆ;
ಸಗ್ಗವೆಂಬುದು ಕಟ್ಟುಕಥೆಯಂತೆ; ಶಾಶ್ವತತೆ,
ನಮ್ಮಾತ್ಮದಮೃತತತ್ವ, ಪ್ರೇಮದಾ ನಿತ್ಯತ್ವ,
(ಕಹಿಯಾದರೂ ನಿನಗೆ ನನ್ನಿಯನೆ ಹೇಳುವೆನು!)
ಎಲ್ಲ ಕನಸಿನ ಜೇಡ ನೆಯ್ದ ಹುಸಿ ಬಲೆಯಂತೆ,
ಅಲಸ ಕವಿಗಳ ತಲೆಯ ಪಾಳ್ಗುಡಿ ಮಿದುಳಿನಲ್ಲಿ!

ಏನಾದರೇನಂತೆ? ಹಾಳಾಗಲಾ ಚಿಂತೆ!
ಎಲ್ಲ ಹಾಳಾಗುವಾ ಮುನ್ನವೇ ನಾವೊಲಿದು,
ಬಾಳ ಹಲ್ಲೆಯ ಹಿಂಡಿ, ಜೇನನೆಲ್ಲವ ಹೀರಿ,
ಮೃತ್ಯು ಬರೆ ಬಾಗಿಲಿಗೆ, ತೆರೆದದರ ಹೆಬ್ಬಾಯ್ಗೆ
ಬಿಸುಡುವಂ! ಸತ್ತೆಸಾಯುವೆವೆ ಎಂದಿದ್ದರೂ!
ಶೂನ್ಯವಾಗುವ ಮೊದಲೆ ಒಲಿದು ನಲಿವುದೆ ಜಾಣ್ಮೆ!
ಸತ್ತಮೇಲೊಂದು ವೇಳೆಗೆ ಶೂನ್ಯವಾಗದಿರೆ,
ಮಾತು ಕೊಡುವೆನು ನಿನಗೆ ನಾ ನಿನ್ನನಲ್ಲಿಯು
ಇಲ್ಲಿಯೊಲಿದಂತೆ ಎದೆಮುಟ್ಟಿಯೊಲಿವೆನೆಂದು!

# ಇಂದ್ರಿಯ ಜಯ

“ ನನ್ನಿಂದ್ರಿಯಂಗಳನು ನಾನೆಂದು ಜಯಿಸುವೆನು ? ”
ಎಂದೊಬ್ಬ ಸಂನ್ಯಾಸಿ ಕೇಳಿದನನೇಕರನು.
ಲೋಕವೆಲ್ಲವು ಮಾಯೆ ; ಪ್ರೇಮವೆಂಬುದು ಮಿಥ್ಯೆ ;
ಸೌಂದರ್ಯವೆಂಬುವುದು ಪ್ರಕೃತಿಯೊಡ್ಡಿದ ಜಾಲ ;
ಸಂಸಾರ ಮರುಭೂಮಿ ; ಎಲ್ಲ ಬಿಟ್ಟರೆ ಮುಂದೆ
ಎಲ್ಲವೂ ಲಭಿಸುವುದು ; ಸಂನ್ಯಾಸದೊಳೆ ಮುಕ್ತಿ ;—
ಎಂದವನು ಕಾವಿಯನು ಉಟ್ಟು, ಬೂದಿಯ ತೊಟ್ಟು,
ದುಡಿದು ತಿನ್ನುವ ಬದಲು ಬೇಡಿಯುಣುವುದ ಕಲಿತು,
ಮಿಂದು ನದಿಯಲಿ ಧ್ಯಾನ ಜಪಗಳನು ಮಾಡುತ್ತ
ಇಂದ್ರಿಯಂಗಳ ಜಯಕೆ—ಮುಕ್ತಿಯಾಸ್ವಾದನೆಗೆ—
ಸಾಧನೆಯ ಮಾಡಿದನು. ಆದರೂ ಆತನಿಗೆ
ಇಂದ್ರಿಯಂಗಳ ಜಯವು ಸಾಧ್ಯವಾಗಲೆ ಇಲ್ಲ.
ಆಗವನು ಕಂಡಕಂಡವರನ್ನು ಕೇಳಿದನು :
“ ನನ್ನಿಂದ್ರಿಯಂಗಳನು ನಾನೆಂದು ಜಯಿಸುವೆನು ? ”

“ ಕಾಶಿಯನು ಕಂಡಂದು ; ” “ ಮೋಹಗಳ ಬಿಟ್ಟಂದು ” ;
“ ಕಾಮ ಜಯವಾದಂದು ; ” “ ದ್ವಂದ್ವಗಳ ಗೆದ್ದಂದು ; ”
“ ಕಾನನಕೆ ನಡೆದು ಏಕಾಂತದಲಿ ಕುಳಿತಂದು ; ”
ಎಂದು ಒಬ್ಬೊಬ್ಬರೊಂದನು ಹೇಳಿ ತೆರಳಿದರು.
ಸಂನ್ಯಾಸಿ ಒಂದೊಂದನೇ ಮಾಡಿ, ದೇವರನು
ಕಾಣದೆಯೆ, ಕಾಮಜಯಿಯಾಗದೆಯೆ, ಬೇಸತ್ತು
ಎದೆಗೆಟ್ಟು ಸೋತವನು, ದಾರಿಯಲಿ ಬರುತಿರಲು,
ಚೆಲುವೆಯೊಬ್ಬಳ ಕಂಡು ಕೇಳಿದನು. “ ಹೇಳಮ್ಮ,
ನನ್ನಿಂದ್ರಿಯಂಗಳನು ನಾನೆಂದು ಜಯಿಸುವೆನು ? ”
ಸುಂದರಿಯು “ ಬಾ ” ಎಂದು ಸಂನ್ಯಾಸಿಯನು ತನ್ನ
ಆಲಯಕೆ ಕರೆದೊಯ್ದು, ಬಾಗಿಲಲಿ ನಿಲಹೇಳಿ,
ಒಳಗಿಂದ ಏನನೋ ಮುಚ್ಚುಹಿಡಿಯಲಿ ತಂದು

‘ ಹಿಡಿ ’ ಎಂದು ನೀಡಿದಳು.  ಸಾಧುವೂ ಮುಷ್ಟಿಯಲಿ
ಮುಚ್ಚಿ ಹಿಡಿದದನು, ದೂರಕೆ ನಡೆದು, ನೋಡಿದನು!
ಬರಿಬೂದಿ!—ಕೈ ಬಿಚ್ಚಿದೊಡನೆಯೇ ಗಾಳಿಯಲಿ
ತೂರಿಹೋಯಿತು.—ಸಾಧು ಆಶ್ಚರ್ಯದಲಿ ನಿಂತು
ಚಿಂತಿಸುತ್ತಿರೆ ಬೂದಿ ಇಂತು ನುಡಿಯಿತ್ತೆಂದು:
“ ನೀ ಸತ್ತು ಸೂಡಿನಲಿ ಹೆಣ ಬೂದಿಯಾದಂದು
ನಿನಗೆ ಇಂದ್ರಿಯ ಜಯವು, ನೀನು ನಾನಾದಂದು! ”

---

## ಕ್ಲೈಬ್ಯವನು ಸಂಹರಿಸೊ

ಕ್ಲೈಬ್ಯವನು ಸಂಹರಿಸೊ, ದೌರ್ಬಲ್ಯವನು ದಹಿಸೊ,
ಹೃದಯಕ್ಕೆ ಪೌರುಷವ ದಯಪಾಲಿಸೊ!
ಮನವು ಸರಿ ಎಂದುದನು ಎದೆಯನುಸರಿಸುವಂತೆ
ದೃಢತೆಯಾ ನಡತೆಯನು ನನ್ನದೆನಿಸೊ!
ರಾಗಸಾಗರದಲ್ಲಿ ಭೋಗಾಭಿಲಾಷೆಗಳ
ಭೈರವ ತರಂಗಗಳು ಅಪ್ಪಳಿಸಲು,
ಲೋಕಮೋಹಕ ಇಂದ್ರಜಾಲ ಸಂಮ್ಮೋಹನಕೆ
ಇಂದ್ರಿಯ ವಿಹಂಗಗಳು ಮನವಳುಕಲು,
ಕ್ಲೈಬ್ಯವನು ಸಂಹರಿಸೊ, ದೌರ್ಬಲ್ಯವ ದಹಿಸೊ,
ಹೃದಯಕ್ಕೆ ಪೌರುಷವ ದಯಪಾಲಿಸೊ;
ಮನವು ಸರಿ ಎಂದುದನು ಎದೆಯನುಸರಿಸುವಂತೆ
ದೃಢತೆಯಾ ನಡತೆಯನು ನನ್ನದೆನಿಸೊ!

---

## ಕಾವಿಯನುಟ್ಟ ತರುಣನೊಬ್ಬನಿಗೆ

ಗೈರಿಕ ವಸನ ಧಾರಿಯಾದ ಮಾತ್ರಕೆ ಧರೆಯ
ಗೌರವಾರಾಧನೆಗಳಿಗೆ ಪಾತ್ರನೇನಯ್ಯ?
ಭ್ರಾಂತ ಸಂನ್ಯಾಸಿ, ಕಾವಿಯನುಟ್ಟ ಮಾತ್ರದಲಿ
ಶಾಂತಿ ಬಂದುದೆ ನಿನಗೆ?  ಜ್ಞಾನಿಯಾದೆಯ ನೀನು?

ಕತ್ತೆ ಕೆಂಗಾವಿಯಲಿ ಎಷ್ಟು ಹೊತ್ತುರುಳಿದರೆ
ಉತ್ತಮೋತ್ತಮ ಅಶ್ವವಾಗುವುದು ಹೇಳಯ್ಯ?
ತಿಳಿದವರ ನುಡಿಗಳನು ಪಡಿನುಡಿಯೆ ನೀ ಜಾಣ-
ಗಿಳಿಯಾದೆ! ತಿಳಿದವನೆ?—ಅವಸರದ ಸಂನ್ಯಾಸ
ಜೀವನೋಪಾಯಕ್ಕೆ ಪಥವೆಂದು ತಿಳಿದೆಯಾ?
ಕಾವಿ ಬರಿ ಮಣ್ಣಲ್ಲ ಕಾಣಯ್ಯ; ಅದು ಬೆಂಕಿ!
ಅಧಿಕಾರಿ ಉಟ್ಟರದು ಉರಿಗಣ್ಣು; ನಿನ್ನಂಥ
ಮದಮೋಹಿ ಧರಿಸಿದರೆ ಕೆಮ್ಮಣ್ಣು! ಹಣ್ಣಾದ
ಮಿಡಿಗಾಯಿಯೋಲೆ ನೀ ಸಂನ್ಯಾಸಿಯಾಗಿರುವೆ;
ಮಿಡಿಗಾಯಿ ಬೆಳೆಬೆಳೆದು ಹಣ್ಣಾದ ತೆರನಲ್ಲ:
ಬುಡದಿಂದ ಕ್ರಮವಾಗಿ ದಿನದಿನಕೆ ಅದು ಬಲಿತು
ಕಡೆಗೆ ಪೊನ್ನಿನ ಬಣ್ಣ ತುಂಬುವುದು ಮೈಯೆಲ್ಲ;
ಮಾರ್ದವ ಸುವಾಸನೆಗಳೊಂದೊಂದನೊಡಗೊಂಡು
ಆರ್ದ್ರತಾ ಮಾಧುರ್ಯ ರಸಪುಷ್ಟಿಯನು ಪಡೆಯೆ,
ಆ ಹಣ್ಣು ಬೆಲೆಹಣ್ಣು, ಜನರ ಮೆಚ್ಚುಗೆಹಣ್ಣು.
ಅಂತಲ್ಲದಾವುದೋ ಪೆಟ್ಟು ತಗುಲಿದ ಹಣ್ಣು
ಮೇಣು ಬೇರೆಬೇರೆ ಹುಳು ಗೈದ ಗಾಯದಿ ಮಿಡಿಯು ಮಿದುವಾಗೆ
ಅದರ ಮಾರ್ದವವೆ ಹೇಸಿಗೆ; ರಸವೊ ಬರಿ ಕೀವು!
ಜಾಣತನ ಅರಿವಲ್ಲ! ಹಮ್ಮು ಸೋಹಮ್ಮಲ್ಲ;
ಅದು ಬರಿಯ ಕತ್ತಲೂ ಅಲ್ಲ; ಬೆಳಕಿನ ‘ಇಲ್ಲ’!
ಹುಲಿಯ ಬಣ್ಣಕೆ ನರಿಯು ಮೈಸುಟ್ಟುಕೊಂಡಂತೆ,
ಹುಲಿಯ ವೇಷದಿ ಕತ್ತೆ ಕಬ್ಬನುಣಹೋದಂತೆ
ಆವೇಶವಿಲ್ಲದೆಯೆ ವೇಷದಲ್ಲಿಯೆ ಮಾತ್ರ
‘ಸ್ವಾಮಿಜಿ’ ಯನನುಕರಿಸೆ ನೀ ನಾಟಕದ ಪಾತ್ರ!

---

# ವಚನ ಬ್ರಹ್ಮ

ನಿನ್ನೆಯ ಮೊನ್ನೆಯ ಹುಡುಗರೊ ನಾವು,
ನಮಗೇತಕೆ ಹೇಳಜ್ಜರ ಸಾವು?
ಜನನವು ಜೀವವು ಮರಣಗಳಂತೆ!
ಏತಕೆ ನಮಗಾ ತತ್ವದ ಕಂತೆ?
ಬಾಲ್ಯದ ತೋಯು ತರಂಗದ ಮೇಲೆ
ತೇಲುತ ನಗುವುದೆ ನಮ್ಮಯ ಲೀಲೆ.
ನಿನ್ನೆಯ ಮೊನ್ನೆಯ ಹುಡುಗರೊ ನಾವು,
ನಮಗೇತಕೆ ಹೇಳಜ್ಜರ ಸಾವು?

ನಶ್ವರ! ನಶ್ವರವೆಂದವರಾರೊ?
ಇಲ್ಲದುದನು ನಿನಗೊರೆದವರಾರೊ?
ಎಲ್ಲವನುಳಿವುದೆ ಆದರೆ ಮುಕ್ತಿ
ಎಲ್ಲವನಪ್ಪುವುದರೊಳಿದೆ ಶಕ್ತಿ.
ಶಕ್ತಿಯ ಮೀರುವುದೇನೋ ಮುಕ್ತಿ?
ಬಿಡು, ಅದು ಕೈಲಾಗದರ ಕುಯುಕ್ತಿ!
ನಿನ್ನೆಯ ಮೊನ್ನೆಯ ಹುಡುಗರೊ ನಾವು;
ನಮಗೇತಕೆ ಹೇಳಜ್ಜರ ಸಾವು?

ರವಿ ನಶ್ವರವನು ನೆನೆವನೆ? ಹೇಳು!
ಶಶಿ ಶಾಶ್ವತವನು ನೆನೆವನೆ? ಹೇಳು!
ಕನಸಿನ ಮುಕ್ತಿಯ ಪಡೆಯುವೆವೆಂದು
ಕೆಲಸವ ಬಿಡುವರೆ ದಿನಮಣಿ ಇಂದು?
ಏಳೆದ್ದೇಳೊ, ಓ ಸೋಮಾರಿ,
ವಚನಬ್ರಹ್ಮವು 'ಮುಕ್ತಿ'ಗೆ ಮಾರಿ!
ನಿನ್ನೆಯ ಮೊನ್ನೆಯ ಹುಡುಗರೊ ನಾವು;
ನಮಗೇತಕೆ ಹೇಳಜ್ಜರ ಸಾವು?

## ಮುದುಕರಾದ ದೊಡ್ಡ ಮನುಷ್ಯರೊಬ್ಬರಿಗೆ

ಅಯ್ಯೊ, ನಿಮಗೀಗೇಕೆ ಬಿರುದು ಗಿರುದಿನ ಗೋಜು,
ಮೇಣು ಪತ್ರಿಕೆಯ ಲಘುತರ ಕೀರ್ತಿ ? ಕಾಣಿಸದೆ
ಅನಿವಾರ್ಯವಾಗಿ ಬಳಿಸಾರುತಿಹ ಜೀವನದ
ಸಂಜೆ ? ಇನ್ನೇನು ಕವಿದು ಬಹ ಕತ್ತಲೆಗಾಗಿ
ಎದೆಯ ಹಣತೆಗೆ ಎಣ್ಣೆ ಬತ್ತಿಗಳನೊಡ್ಡಯಿಸಿ
ಸೊಡರು ಹೊತ್ತಿಸಿಕೊಳುವ ಹೊತ್ತಾಗಲಿಲ್ಲೇನು,
ಹೇಳಿ ಮುದುಕಯ್ಯ ? ಇರುಳಿನ ಪಯಣಕನುವಾಗಿ,
ಕಾಣದೂರಿನಲಿ ಕೈಹಿಡಿದು ನಡೆಸಾತನನು
ಹೃದಯಕಾಹ್ವಾನಿಸುತೆ, ದೃಢನಿಶ್ಚಯವ ಮಾಡಿ,
ಶಾಂತಿ ಯಷ್ಟಿಯ ಹಿಡಿಯಲಿನ್ನೂ ನಿಮಗೆ ಮನಸು
ಬರಲಿಲ್ಲವೇನು ?—ಗೌರವವಿಹುದು ನಿಮ್ಮಲ್ಲಿ
ಘನಗೆ ; ಜನ ಮೆಚ್ಚುವಂದದಿ ಬದುಕಿ ಬಾಳಿಹಿರಿ ;
ಪಡೆಯ ಬೇಕಾದುದನು ಪಡೆದಿಹಿರಿ ; ಕೊಡುವುದನು
ಕೊಟ್ಟಿಹಿರಿ,—ಸ್ತುತಿಸಿದರೆ ಮಂದೆಯ ಮರುಳು ಮಂದಿ
ಮರುಳಾಗಬೇಡಿ ನೀವದಕೆ : ಬಾಳಂಚಿನಲಿ
ನಿಂತು, ತತ್ತರಿಸುತ್ತೆ ಸಾವಿನಾಳವ ಕಂಡು,
ಕಳೆದ ಬದುಕನು ನೆನೆದು. ಮೆಲ್ಲನೆಯೆ ತಲೆದಿರುಹಿ,
ಹಿಂದೆ ಹಾರೈಸಿ ನೋಡುವ ನಿಮ್ಮನೀ ಮಂದಿ
' ಮತ್ತೆ ಹಿಂದಕೆ ಬಂದು ತಮ್ಮ ತುತ್ತನ್ನು ಕಸಿದು
ತಮಗೆ ತೊಂದರೆ ಕೊಡದೆ ಇರಲಿ ' ಎಂಬಂದದಲಿ
ಬಿರುದೆಂಬ ಬಿದಿರುಗಳುವಿಂ ನಿಮ್ಮ ನೂಂಕುತಿದೆ
ತಿಮಿರ ಪಾತಾಳ ನಿಮ್ನತೆಗೆ ! ಬಣ್ಣಕೆ ಬಾಯಿ
ತೆರೆವ ಮಕ್ಕಳ ತೆರದಿನಾಗುವಿರಿ ನೀವಿವರ
ಮೆರೆವಣಿಗೆಗಳಿಪಿದರೆ ! ಈ ಮಂದಿಗೇನಂತೆ ?
ಕಪ್ಪೆಯೋ ಕೋತಿಯೋ ಯಾವುದಾದರು ಸಾಕು,
ವಾದ್ಯವೂದುತ್ತೆ ಪಲ್ಲಕ್ಕಿಯನು ಹೊತ್ತೂರಲಿ
ನಲಿದು ಮೆರೆವಣಿಗೆ ಮಾಡಿದರಾಯ್ತು ! ಮೆರೆದರಾಯ್ತು !

ನಿಮಗೆ ಜೀರ್ಣಿಸಿ ಕೊಳುವ ಶಕ್ತಿಯಿರುವಾಗಂದು
ನಿಮ್ಮ ಸುಖವನು ಕರುಬಿ ತಿನಲೀಯದಿವರೆಲ್ಲ
ಹಲ್ಲುದುರಿ ಹೋದುದನು ಕಂಡಿಂದು ತರತರದ
ಸಿರಿಯ ನೈವೇದ್ಯವನು ತಂದಿಕ್ಕುತಿಹರಯ್ಯ,
ನಿಮಗೆ ತೋರಿಸಿ ತಾವು ತಿಂದು ಸುಖಿಸುವೆವೆಂದು
ಚೆನ್ನಾಗಿ ನಂಬಿ! ಸಭೆಯಲಿ ನೋಡಿ: ಅದೊ ಅವರು
ಇವರ ಸಿಹಿ ಸಿಹಿ ಮೊಡೆ ಬಂದಿಹರು! ನೋಡವನು
ಮಾನಪತ್ರವನೋದುತಿರೆ ನಿಮಗೆ, ಮಂತ್ರಿಗಳ
ಕಡೆಗೆ ತಿರುಗುತೆ ಕೃಪೆಯ ಕೋರುತಿಹನಕ್ಷಿಯೊಳೆ!—
ತಿನ್ನಲಾರದ ದೇವರಿಗೆ ರುಚಿರುಚಿಯ ನೈವೇದ್ಯ!
ನಕಲಿಯಿದು ನಿಜವೆಂದು ಮೋಸ ಹೋದೀರಯ್ಯ!
ನೀವಿವರ ಬಲೆಯ ತಳುಕಿಗೆ ಬೀಳದಿರಿ. ಬಿರುದು
ಗಿರುದಿನ ಬಿಸಿಲ್ಗುದುರೆಗೆದೆಯ ಬಾಯಾರಿಕೆಯು
ಬತ್ತದು. ಮುನಿಯಬೇಡಿ, ಕಿರಿಯನ ಬೋಧೆಯೆಂದು!

---

## ಕೀರ್ತನೆಯ ಮಹಿಮೆ

ಗುಡಿಯ ವಿಗ್ರಹದೆದುರು ಕುಳಿತು ಹಗಲೂ ಇರುಳು
ಹಾಡಿದನು ದಾಸನೊಬ್ಬನು. ಬೇಯುತಿರೆ ಕರುಳು
ಭಗವಂತನಿಗೆ, ಸಹಿಸಲಾರದೆಯೆ ಮೈದೋರಿ
ಭಕ್ತನಿಗೆ ಕೈಮುಗಿದು ತಲೆವಾಗಿ ನಗೆಬೀರಿ
ಬೇಡಿದನು, ತನಗೊಂದು ವರವ ಕೊಡಬೇಕೆಂದು.
ಭಕ್ತನೆಂದನು "ದೇವ, ತಿರುಕನನು ತಿರಿಯುವರೆ?
ನಾನೇನ ಕೊಡಬಲ್ಲೆ? ಪರಿಹಾಸ್ಯಮಾಡುವರೆ?"
"ಪರಿಹಾಸ್ಯವಲ್ಲಯ್ಯ ಇದು! ನಿನ್ನ ದಮ್ಮಯ್ಯ,
ನನಗೊಂದು ವರವಿತ್ತು ನನ್ನ ಕಾಪಾಡಯ್ಯ!"
ಭಗವಂತನಿಂತೆನಲು ಭಕ್ತನಚ್ಚರಿಯಿಂದೆ

ವರವೀಯಲೊಪ್ಪಿ ನುಡಿದನು " ಬೇಡು, ಓ ತಂದೆ ! "
ಭಗವಂತ ಬೇಡಿದರೆ ನೀಡದಿರಲಾದೀತೆ ?
ಭಗವಂತನಿಗೆ ಕೊಟ್ಟ ದಾನ ಹೊಳ್ಳಾದೀತೆ ?

ದೇವರೆಂದನು " ಭಕ್ತವರ್ಯ, ನಾ ಕೇಳಲಾರೆ ;
ಸಾಕು, ನಿಲ್ಲಲಿ ನಿನ್ನ ಗಂಟಲಿನ ಗಾನಧಾರೆ !
ಈ ಸಾರಿ ತಪ್ಪಾಯ್ತು, ಕ್ಷಮಿಸಯ್ಯ ದಯವಿಟ್ಟು,
ನಿನಗೆ ಮುಂದಿನ ಜನ್ಮಕೊಳ್ಳೆಕಂಠವ ಕೊಟ್ಟು
ತಕ್ಕ ಪ್ರಾಯಶ್ಚಿತ್ತ ಮಾಡಿಕೊಳ್ಳುವೆ ನಾನು ;
ಸದ್ಯಕ್ಕೆ ಭಕ್ತ ನಾಂ, ಭಗವಂತನೈ ನೀನು !
ಈ ಸಾರಿ ವರವಿತ್ತು ನನ್ನ ಕಾಪಾಡಯ್ಯ ;
ನಿನ್ನ ಗಂಟಲು ಕಟ್ಟು, ದಾಸಯ್ಯ, ದಮ್ಮಯ್ಯ ! "

ಎಂದು ಭಗವಂತ ತೆರಳಿದನು ವೈಕುಂಠಕ್ಕೆ !—
ಅಂತು ಕೀರ್ತನೆ ಮಹಿಮೆ ಗೊತ್ತಾಯ್ತು ಲೋಕಕ್ಕೆ !

---

## ದೇವರು-ಪೂಜಾರಿ

ದಿಗಂತದಿಂದೆ ದಿಗಂತಕೆ ಹಬ್ಬಿದೆ
ವಿಶ್ವವ ತಬ್ಬಿದೆ
ರುಂದ್ರ ರಾತ್ರಿ !
ಸಾಂದ್ರ ತಮಂಧದಿ ಮುಳುಮುಳುಂಗುತೆ ಕರಂಗಿದೋಲಿದೆ ಧಾತ್ರಿ !
ವಿಶಾಲ ವ್ಯೋಮದಿ ತಾರೆಗಳಿಲ್ಲ,
ಶಶಿಯಿಲ್ಲ,
ಕಾಂತಿಯ ಕಣವಿಲ್ಲ !
ಜಗತ್ತು
ಪ್ರಜ್ಞೆಯಿಲ್ಲದೆ ಶೂನ್ಯಮಹಾಶವ ಬಿದ್ದವೊಲಿದ್ದತ್ತು !

ಹುಸಿಮುಮತೆ,
ಇಂದ್ರಿಯ ಲೋಲುಪತೆ,
ಮೌಢ್ಯದ ಸಂತೃಪ್ತಿ,

ಅಜ್ಞಾನದ ಸುಪ್ತಿ;
ಭಕ್ತಿಯ ಹೆಸರನು ಧರಿಸುತಿ ಮೆರೆಯುವ ಚಿತ್ತದ ದಾಸ್ಯ;
ದೇವರ ಗುಡಿ ಎಂಬುವ ಸೆರೆಯಲ್ಲಿ
ಸ್ವಾತಂತ್ರ್ಯದ ಶವಸಂಸ್ಕಾರದ ಪರದೆಯ ಮರೆಯಲ್ಲಿ
ಪೂಜೆಯ ನಕಲಿಯ ಪರಿಹಾಸ್ಯ!
ಶಾಸ್ತ್ರದ ಆಚಾರದ ಧರ್ಮದ ಕಬ್ಬಿಣನೇಣು,
ಸಿಲುಕಿಹುದದರಲಿ ಮಾನವನಮೃತಾತ್ಮದ ಗೋಣು!

ಇರೆ ಇಂತುಟು ಭುವನದ ಬಾಳು,
ಅದೊ ನೋಡದೊ ಕೇಳು:
ನಿದ್ರೆಯ ಕದಡಿದೆ ಅವತಾರನ ತೂರ್ಯದ ವಾಣಿ;
ಕಂಪಿಸುತಿದೆ ಜಡತೆಯೊಳದ್ದಿದ ಕ್ಷೋಣಿ!
ದಕ್ಷಿಣ ಹಸ್ತದಿ ಪ್ರಜ್ವಲಿಸುತ್ತಿದೆ ಉರಿವ ಹಿಲಾಲು,
ಕತ್ತಲೆಯನು ಕತ್ತರಿಸುವ ಬೆಂಕಿಯ ಕರವಾಳು!
ಮೌಢ್ಯ ಕಾನನಕೆ ಬೆಂಕಿಯ ಹೊತ್ತಿಸಿ
ತಿಮಿರ ಸಮುದ್ರವ ಶೋಷಿಸಿ ಬತ್ತಿಸಿ
ಪ್ರಸರಿಸಿ ಜ್ವಾಲಾಜ್ಯೋತಿಯ ನಡೆದಿರೆ ಅವತಾರನು ಮುಂದೆ,
ಅದೊ ಹೊರಟನು ಪೂಜಾರಿಯು ಹಿಂದೆ!
ಪಂಚಪಾತ್ರೆಯಲಿ ಪಾವನತೀರ್ಥವ ಬಂಧಿಸುತೆ,
ವಂದನೆ ಆರಾಧನೆ ಅಭಿಷೇಕದ ನೆವದಿಂದೆ
ಅವತಾರನು ಹೊತ್ತಿಸಿದುರಿಯನು ಅಗ್ರೋದಕದಿಂ ನಂದಿಸುತೆ,
ಬೆಂಕಿಯನಾರಿಸಿ ಬೂದಿಯಮಾಡಿ,
ಆ ಬೂದಿಯ ಮಹಿಮೆಯ ಕೊಂಡಾಡಿ
ಅದೊ ಹೊರಟನು ಪೂಜಾರಿಯು ಹಿಂದೆ!
ಭಕ್ತರು ದೂರದ ತೂರ್ಯವನಾಲಿಸಿ ಬಳಿ ಬರುವನಿತರಲಿ
ಆ ತೂರ್ಯ ಮಹಾಸ್ವನವೆಲ್ಲಿ?
ಕೇಳುತಲಿದೆ ಪೂಜಾರಿಯ ಬರಿ ಕಿರುಗಂಟೆಯುಲಿ!
ಅವರಾ ಕಂಡಾ ಕಿಚ್ಚಿನ ಕಾಂತಿಯದೆಲ್ಲಿ?
ಬೆಳಕಿಗೆ ಬದಲಾಗವರನು ಕಾದಿದೆ ಬರಿ ಬೂದಿಯ ರಾಶಿ!

ಕಟ್ಟಕಡೆಯಲಿ
ದೇವರ ಗುಡಿಯಲಿ
ಪೂಜಾರಿಯೆ ದಿಟದ ನಿವಾಸಿ ;
ದೇವರೆ ಪರದೇಶಿ !—
ಜ್ಯೋತಿಯ ಬಯಸುತೆ ಬಹ ಭಕ್ತರಿಗೆ ವಿಭೂತಿಯ ಹಂಚುವನು !
ಬೆಂಕಿಯ ನಂದಿಸಿ
ಬೂದಿಗೆ ವಂದಿಸಿ
ದೇವರ ಮರೆಗೈಯುತೆ ಪೂಜಾರಿಯೆ ಮಿಂಚುವನು !

ಸರಿ, ಮತ್ತೆ—
ದಿಗಂತದಿಂದೆ ದಿಗಂತಕೆ ಹಬ್ಬಿದೆ ರುಂದ್ರ ರಾತ್ರಿ !
ಸಾಂದ್ರ ತಮಂಧದಿ ಮುಳುಮುಳುಗುತ್ತೆ
ಕರಂಗಿದೋಲಿದೆ ಧಾತ್ರಿ !

---

## ದೇವರು ಸೆರೆಯಾಳ್

ದೇವರು ಸೆರೆಯಾಳ್, ದೇಗುಲ ಸೆರೆಮನೆ,
ಕಾವಲು ಪೂಜಾರಿ !

ನೀನಾವಾಗಲು ನನ್ನಯ ಬಳಿಯಿರೆ
ಬಲು ತೊಂದರೆ ಎಂದು
ಗಿರಿಶಿಖರದೊಳತಿದೂರದಿ ಕಟ್ಟಿದೆ
ಗುಡಿಯನು ನಿನಗೊಂದು :
ಕಲ್ಲಿನ ಗೋಪುರ, ಕಲ್ಲಿನ ಗೋಡೆ,
ದುರ್ಗದವೊಲೆ ಬಲು ದುರ್ಗವು ನೋಡೆ !

ಸೆರೆಯನು ತಪ್ಪಿಸಿಕೊಳ್ಳದ ತೆರದಲಿ
ಅರ್ಚಕ ರಕ್ಷೆಯಿದೆ ;
ತೆಂಗಿನ ಕಾಯೊಳೆ ತಲೆಯನು ಬಡಿಯುವ
ಪೂಜೆಯ ಶಿಕ್ಷೆಯಿದೆ !
ಪುರಸತ್ತಾದರೆ ಕೆಲಸದೊಳಿಲ್ಲಿ
ಬೇಸರ ಪರಿಹಾರಕೆ ಬಹೆನಲ್ಲಿ !

# ಹೂವು-ದೇವರು

ಚೆಲುವೇ ದೇವರು, ಒಲವೇ ಪೂಜೆ;
ಎಂಬುದೆ ರಸಜೀವನದೋಜೆ.
ಕಲೆಯನು ಮೀರುವ ಸಾಧನೆಯಿಲ್ಲ;
ಕಲೆಯೊಳೆ ಪುರುಷಾರ್ಥಗಳೆಲ್ಲ;
ಕಲೆಯಿರದೆದೆಗೆ—ಏನಿಲ್ಲ!

ಕಾಮನ ಬಿಲ್ಲಿನ ಬಿತ್ತವ ಬಿತ್ತಿ
ಬೆಳೆಯಾದಂತಿದೆ ಹೂದೋಟ.
ಮೋಹಿಸುವಪ್ಸರಿಯರೆ ನೆರೆ ಮುತ್ತಿ
ಕುಣಿಕುಣಿವಂತಿದೆ ಈ ನೋಟ.
ಹಳದಿಯ ಕೆಂಪಿನ ನೀಲಿಯ ಹಸುರಿನ
ಚಿನ್ನದ ಬೆಳ್ಳಿಯ ಮುತ್ತಿನ ಪಚ್ಚೆಯ
ತರತರ ಬಣ್ಣದ ತೆರೆತೆರೆಯಾಟ
ಎದೆಯಲಿ ನಲುಮೆಯ ಚೆಲುಮೆಯ ಚಿಮ್ಮಿಸೆ,
ಕಚಗುಳಿಯಿಡುತಿದೆ ಹೂಬೇಟ!

ಪ್ರಾತಃಕಾಲದ ಹೊಂಬಿಸಿಲಲ್ಲಿ
ಸ್ವರ್ಗವೆ ಭೂಮಿಗೆ ಇಳಿದಿದೆ ಇಲ್ಲಿ;
ಕಂಗಳೆ ತೇಲಿವೆ ಬಣ್ಣದ ಕಡಲಲಿ.
ಕೆಂಪಾಗಿಹ ನೆತ್ತರು ನನ್ನೊಡಲಲಿ
ಕಣ್ಣೀಂಟುವ ಬಣ್ಣವನೇ ತಾಳಿ
ಮಿನು ಮಿಂಚುತ್ತಿದೆ ಕಣ್ಣನೆ ಹೋಲಿ.

ಹೂ ಕುಯ್ಯಲು ಬಂದನು ಪೂಜಾರಿ;
ಹೂ ಬುಟ್ಟಿ ಅದೋ ಕೈಯಲ್ಲಿ!
ಹೂಗಳ ಚೆಲುವಿಗೆ ದೇವರೆ ಮಾರಿ?
ಪೂಜಾರಿಯೆ ಕಟುಕನೆ ಇಲ್ಲಿ?

ಹಕ್ಕಿಯ ಮರಿಗಳ ಕುತ್ತಿಗೆ ಮುರಿದು
  ಬೇಡನು ಕೊಲ್ಲುವ ರೀತಿಯಲಿ,
ಹೂಗಳ ತೊಟ್ಟನು ತಿರುಪ್ಪಿ ಹರಿದು
  ಬುಟ್ಟಿಗೆ ಬಿಡುವನು 'ಪ್ರೀತಿಯಲಿ'!

ನಿತ್ಯಾಚಾರದ ನೀರಸ ದೃಷ್ಟಿ
ಅವನದು. ಸೌಂದರ್ಯದ ಶಿವಸೃಷ್ಟಿ
  ಹೋಗಿಹುದಾತಗೆ ಮೃತವಾಗಿ.
ಕಾಣದೊ: ಕಲ್ಲಿದೆ ಹೂ ಕೊಯ್ವಂತೆ
  ಕೊಯ್ವನು ಚೆಲುವಿಗೆ ಕುರುಡಾಗಿ!

  ಓ ಪೂಜಾರಿ,
ಕೋಮಲ ಸುಮಗಳ ಕತ್ತನು ಕೊಯ್ದು
ಕಗ್ಗಲ್ಲಿನ ಕಗ್ಗತ್ತಲೆಗೊಯ್ದು
ಗುಡಿಯಾ ಕಲ್ಲಿಗೆ ಬಲಿ ಕೊಡದಿದ್ದರೆ
ಪರಮಾತ್ಮಗೆ ತೃಪ್ತಿಯೆ ಇಲ್ಲೇನು?
ಈ ಗಿಡದೊಳೆ ರಾರಾಜಿಸುತಿದ್ದರೆ
ಶಿವಪೂಜೆಯು ಸಲ್ಲುವುದಿಲ್ಲೇನು?
ಚೆಲುವೆಂಬುದೆ ಆ ಶಿವನಲ್ಲೇನು?
ಸೌಂದರ್ಯದ ಸುಮ ನಯನವ ಕಿತ್ತರೆ
  ಶಿವನಾರಾಧನೆಯಾದೀತೆ?
ಶಿವಮುಖ ಚಂದ್ರಿಕೆ ಚೆಲುವದು ಸತ್ತರೆ
  ಭುವನಕೆ ಮಂಗಳವಾದೀತೆ?

  ಬಿಡೊ ಅಲ್ಲಿರಲಿ ಆ ಹೂವು!
ನೀ ಸೃಷ್ಟಿಸಲಾರದ ಚೆಲುವಿಗೆ ನಿನ್ನಿಂದೇತಕೆ ಸಾವು?

---

# ಮೊದಲನೆ ದೇವರು ಈ ಹಣ್ಮುದುಕಿ

ಮೊದಲನೆ ದೇವರು ಈ ಹಣ್ಮುದುಕಿ
   ನೀಡಜ್ಜಿಗೆ ಭಿಕ್ಷೆ!
ಬಾಳೀಕೆಗೆ ಸಾಕಾಗಿದೆ ಬದುಕಿ ;
   ಜೀವಿಸುವುದೆ ಶಿಕ್ಷೆ!
ನೆತ್ತಿಯ ದೇವರಿಗೇನಂತಿರಲಿ ;
ಮೊದಲಜ್ಜಿಯ ಮನಕಿಂಪೈತರಲಿ.

ಗಿರಿ ಮಸ್ತಕದಾ ಕಲ್ಗುಡಿ ದೇವರೊ
   ಸಂಪತ್ತಿನ ಬೀಡು ;
ಗಿರಿ ಪದಧೂಳಿಯೊಳುರುಳುವಳಿವಳೋ
   ತೊವಲೆಲುವಿನ ಗೂಡು ;
ಮೊದಲೀ ತಿರುಕಿಗೆ ಪೂಜೆಯ ಮಾಡು :
ಮೊಗ ನಗುವಂದದಿ ಕಾಣಿಕೆ ನೀಡು.

ಮಲೆಯಾ ಮೂರ್ತಿಯ ನೋಡಲು ತವಕವೆ?
   ಇರಲದು ಆಮೇಲೆ !
ಮುದಿತನ ಮೈವೆತ್ತೀಕೆಯೊಳೊಂದಿದ
   ರುದ್ರ ಕಲಾಲೀಲೆ !
ನೋಡದೊ: ಬತ್ತಿದ ಹಲ್ಲಿಲಿ ಬಾಯಿ,
ತೆರೆ ಸುಕ್ಕಿದ ಮೊಗದಾ ಬಡ ತಾಯಿ !

ತಲೆ ಕೆದರಿದ ಹಣ್ಕೂದಲು ಬೆಳ್ಳಿ,
   ಕಬ್ಬಿಣದೊಲು ಮೋರೆ ;
ಕಣ್ಕಾಣದು, ಕಿವಿ ಕೇಳದು ; ಕಾಣದೊ,
   ಕೆನ್ನೆಯೊಳಿದೆ ಕೋರೆ!
‘ ಕಾಣುತ್ತಿದೆ ಶಿವ ಮಾಡಿದ ಸೃಷ್ಟಿ ! ’
‘ ಅಯ್ಯೋ, ಕುರುಡಾದುದೆ ಶಿವ ದೃಷ್ಟಿ ? ’

‘ ಯಾರಿಲ್ಲವೆ ನಿನಗೋ ಎನ್ನಜ್ಜೀ ?
   ಮೊಮ್ಮಕ್ಕಳು ಕೂಡ ? ’

'ಮಾತಾಡಲು ತ್ರಾಣವೆ ಇಲ್ಲವಳಿಗೆ ;
  ನೀ ಪ್ರಶ್ನಿಸ ಬೇಡ ; '
'ಹಾಳಾ ಯಮನಿಗೆ ಕರುಣೆಯೆ ಇಲ್ಲ :
ಸಾವ್ ಬೇಕಾದವರನು ಕೊಲಲೊಲ್ಲ !

ಇಲ್ಲಾ, ಈ ಮುದುಕಿಗೆ ಯಾರಿಲ್ಲ !
  ಹಾ, ದೇವರು ಇಲ್ಲ !
ಈಕೆಗೆ ಮರುಭೂಮಿಯು ಜಗವೆಲ್ಲ ;
  ಹಸುರಿನ ಹನಿಯಿಲ್ಲ.
ಮನುಜರ ಕನಿಕರವಾದರು ಇರಲಿ ;
ದೇವರನದು ಈ ನೆಲಕೆಳೆತರಲಿ !

ತಟ್ಟೆಯ ತೆಂಗಾಯನು ಒಡೆದಲ್ಲಿಡು ;
  ಕೊಡು ಹಣ್ಗಳನಿಲ್ಲಿ !
ನಲ್ಮಾತೆರಡನು ನುಡಿ ಮುದಿಕಿವಿಗೆ :
  ಮರುವನವಹುದಲ್ಲಿ !
ಅದಕಿಂ ಪಿರಿದೇನರ್ಚಕ ಮಂತ್ರ ?
ಈ ಪೂಜೆಗೆ ಮಿಗಿಲಾವುದು ತಂತ್ರ ?

ಕ್ಷಮಿಸೆಮ್ಮನು, ಓ ಕಣ್ಕೆವುಡಜ್ಜೀ.
  ನಾವೆಲ್ಲರು ಸೇರಿ,
ಹೇಗೋ ಏನೋ ಅಂತೂ ಇಂತೂ
  ನಾವೆಲ್ಲರು ಸೇರಿ,
ನಿನ್ನನು ಈ ಗತಿಗೆಳೆದಿದ್ದೇವೆ !
ಆ ತಪ್ಪಿಂ ತಪ್ಪಿಸಿಕೊಳ್ಳಲು ಈ ದೇವರಗೀವರಸೇವೆ !

---

## ಕವಿಯ ಕೀರ್ತಿ

ಸತ್ತ ಕಬ್ಬಿಗನೊಬ್ಬನೈತಂದಿಳೆಗೆ ಮತ್ತೆ
ತನ್ನ ಕೀರ್ತಿಯ ಹಬ್ಬುಗೆಯನಳೆಯಲೆಂದೆಳಸಿ
ನೋಡುತರಸುತ ತೊಳಲಿದನು, ಸೂಕ್ಷ್ಮಕಾಯದಲಿ,

ನಾಡೊಳಲ್ಲಲ್ಲಿ. ಒಂದೆಡೆ ಸ್ಮೃತಿಯ ಮಂದಿರಂ
ಕಣ್ಣು ಕೋರೈಸಂತೆ ಹೊನ್ನ ಸಿಂಗಾರದಲಿ
ಮೆರೆದಿತ್ತು. ಮತ್ತೊಂದು ಕಡೆ ತನ್ನ ವಿಗ್ರಹಂ
ಹಾಲ್ಗಲ್ಲಿನಲಿ ಕಡೆದು ನಡುಬೀದಿ ಚೌಕದಲಿ
ಹೊನ್ನಕ್ಕರದ ಬಳಹದೊಡಗೂಡಿ ನಿಂತಿತ್ತು.
ಮಗುದೊಂದು ತಾಣದಲಿ ತನ್ನ ಚಿತ್ರಕೆ ಹೂವು
ಮುಡಿಸಿ, ಪರಿಮಳ ಗಂಧ ಕರ್ಪೂರಗಳನಿತ್ತು,
ಪೂಜೆ ನಡೆದಿತ್ತು. ಒಂದೆಡೆ ವಿಮರ್ಶಕವರ್ಯ
ಪಂಡಿತೋತ್ತಮನೊಬ್ಬನವನ ಕಬ್ಬವ ಕುರಿತು
ವ್ಯಾಖ್ಯಾನ ಕೊಡುತಿದ್ದನಾಲಿಪರ ಚಪ್ಪಾಳೆ
ಕಿವುಡುಗೈವಂತೆ. ಇನ್ನೊಂದು ಕಡೆ ಪತ್ರಿಕೆಯ
ಮುಖವೆಲ್ಲ ಕವಿಯ ಸಂಕೀರ್ತನೆಯ ಮಸಿಯಿಂದೆ
ಕರಿಹಿಡಿದು ಹೋದಂತೆಯಿತ್ತು! ಇದನೆಲ್ಲವನು
ಕಂಡು ಕವಿ ಕಂಬನಿಯ ಸೂಸಿದನು ನಿಡುಸುಯ್ದು
ತನ್ನೊಡನೆ ತನ್ನ ಕೀರ್ತಿಯುಮುಳಿದುದೇ ಎಂದು!
ಖಿನ್ನಮುಖದಲಿ ಮರಳಿ ಸಗ್ಗಕೆ ಮರಳಲೆಂದು
ನಡೆಯುತಿರೆ, ದಾರಿಯೆಡೆ ಒಂದರಣ್ಯದ ಮಧ್ಯೆ,
ಹಳ್ಳಿಮನೆಯೊಂದರಿಂ ತನ್ನೊಂದು ಕಬ್ಬಮಂ
ವಾಚಿಸುವ ಸಂಗೀತ ಕೇಳಿಸಿತು. ಕೌತುಕಕೆ
ಕವಿ ನಡೆದನಲ್ಲಿಗೆ. ಅಲ್ಲಿ, ಯಃಕಶ್ಚಿತಂ
ತಾನೊಬ್ಬನಾ ಕವನವನ್ನೋದುತೆದೆಯುಕ್ಕಿ,
ಭಾವರಸದಾನಂದದಾವೇಶದಿ ಪೊಂಗಿ
ಕಂಬನಿಯ ಕರೆಯುತಿರೆ ಆತನಿಗೆ ಕಬ್ಬಿಗಂ
ಕೈಮುಗಿದನೊಡನೆ: ಯಾರೊಬ್ಬರಲ್ಲಿರಲಿಲ್ಲ,
ತನ್ನ ಕಲ್ಪಿಯ ತೋರ್ಕೆಗವನೋದುತಿರಲಿಲ್ಲ;
ಕವಿಯ ಪ್ರತಿಭೆಗೆ ಭಾವದಾರತಿಯನಿರದೆತ್ತಿ
ತನ್ಮಯಾನಂದ ಪೂಜೆಯೊಳಿರ್ದನಾ ಹೃದಯಿ!
ಅವನ ಕಣ್ಣಿನ ಹನಿಯ ಹೃದಯದಲಿ ಕಾಣಿಸಿತು

ಕಬ್ಬಿಗಗೆ ತನ್ನ ಕೀರ್ತಿಯು ನಿತ್ಯವುಂದಿರಂ!
ಆ ರಸಸಲಿಲ ಗಂಗೆಯಲಿ ಮಿಂದು, ಶುಚಿಯಾಗಿ,
ನಗೆ ಮುಗುಳ ಮಾಲೆಯಿಂದಿರದೆ ಸಿಂಗರಗೊಂಡು,
ಧನ್ಯ ನಾನೆಂದೆನುತ ಸಗ್ಗಕಡರಿದನು ಕವಿ,
ತನ್ನಾ ಯಶೋ ಸ್ಥಿರತೆಯುತ್ಸಾಹದಲಿ ತೇಲಿ!

## ನಾನು ಕವಿಯಲ್ಲ

ನನ್ನ ಕೃತಿ ಕಲೆಯಲ್ಲ;
ನಾನು ಕವಿಯಲ್ಲ.
ಕಲೆಗಾಗಿ ಕಲೆಯೆಂಬ
ಹೊಳ್ಳು ನೆಲೆಯಿಲ್ಲ.

ಮೆಚ್ಚುಗೆಯೆ ನನಗೆ ಕೊಲೆ;
ಬದುಕುವುದೆ ನನಗೆ ಬೆಲೆ.
ಸಾಧನೆಯ ಛಾಯೆ ಕಲೆ;
ವಿಶ್ವಾತ್ಮವದಕೆ ನೆಲೆ.
ನಿನಗದು ಚಮತ್ಕಾರ;
ನನಗೊ ಸಾಕ್ಷಾತ್ಕಾರ!
ಮೌನದಿಂದನುಭವಿಸು:
ಕೋ ನಮಸ್ಕಾರ!
ಕಲೆಯೆಂದು ಹೊಗಳುವಡೆ:
ಕೋಟಿ ಧಿಕ್ಕಾರ!

## ವರಕವಿಯ ಪಂಥ

ಕೋಗಿಲೆಯ ಕಂಠಕ್ಕೆ ಸ್ವರ್ಣಪದಕವ ತೊಡಿಸಿ
ನೇಣು ಬಿಗಿಯುವುದೇಕೆ ಬಹುಮಾನವೆಂದು?
ಹಾರ ಭಾರಕೆ ಗೋಣು ಕುಸಿದು ಕುಗ್ಗಲು, ಗಾನ
ಕೊರಗಿ ಕರ್ಕಶವಾಗಿ ನರಳುವುದು ನೊಂದು!

ಬಿರುದು ಬಾವಲಿ ಹೆಚ್ಚೆ? ಹೆಸರು ಹೊಗಳಿಕೆ ಹೆಚ್ಚೆ,
ಪಿಕವರಗೆ ಶಿವ ಕೊಟ್ಟ ಸವಿಗೊರಲಿಗಿಂತ?
ಕೇಳಿ ಸವಿದೆಯ? ಸಾಕು, ಅದೆ ಪರಮ ಬಹುಮಾನ!
ದಿವ್ಯ ನಿರ್ಲಕ್ಷತೆಯೆ ವರಕವಿಯ ಪಂಥ!

---

## ಕೈಮುಗಿ ಈ ತಂತಿಯ ಕಂಬಕ್ಕೆ

ಆಲಿಸು ನಿಂತಿಲ್ಲಿ,
ಈ ತಂತಿಯ ಕಂಬದ ಬುಡದಲ್ಲಿ.
ಆಲಿಸು, ಕಿವಿಗೊಟ್ಟಾಲಿಸು, ಕಣ್ಮುಚ್ಚಿ,
ಕಲ್ಪನೆ ರೆಕ್ಕೆಯ ಬಿಚ್ಚಿ!
ಹಾರಲಿ, ಹಾರಲಿ ನಿನ್ನಾತ್ಮದ ಹಕ್ಕಿ
ದಿಕ್ಕಿನ ದಿಕ್ಕಿನ ಗೋಡೆಯ ಮೀಟಿ,
ಕಾಲವ ದೇಶವನಾಕಾಶವ ದಾಟಿ,
ಬ್ರಹ್ಮಾಂಡದ ಚಿಪ್ಪನ್ನೊಡೆವಂದದಿ ಕುಕ್ಕಿ!—
ಹಾರಲಿ ನಿನ್ನಾತ್ಮದ ಹಕ್ಕಿ.
ಆಲಿಸು, ಝೇಂಕಾರ!
ನಾದಬ್ರಹ್ಮದ ವೀಣೆಯ ಮಿಡಿದಂದದ ಓಂಕಾರ!

ಮಲೆನಾಡಿನ ಕಾಡಿನ ಮಧ್ಯೆ
ಜಗದಿಂ ಜಗುಳಲ್ಕಿರುಳಿನ ನಿದ್ದೆ,
ಚೈತ್ರ ದಿನೇಶನ ಚಿನ್ನದ ಹೊನಲು
ಬನದೆಲೆ ಹಸುರಲಿ ಹೊಳೆಹರಿಯುತ್ತಿನಲು,
ದನಿ ಜೇನಿಳಿಸುತ್ತಿರೆ ಕಾಜಾಣ,
ಉಲಿಯುಲಿಯುತ್ತಿರೆ ಬಹು ಖಗ ಸಂಮ್ಮೇಲನಗಾನ,
ಹುಚ್ಚಿಡಿದಂದದಿ ಹೂ ತುಂಬಿ
ಬೆಳೆದಾ ಬಿತ್ತರದೆತ್ತರದಾ ನಂದಿಯ ಮರದಲ್ಲಿ
ಲಕ್ಕಲಕ್ಕದಲಿ ಕಿಕ್ಕಿರಿದಿರೆ ಜೇಂಬುಳು ಮೇಣ್ ದುಂಬಿ,
ನಿಂತೇಕಾಂತದೊಳಾ ಮರದಡಿಯಲ್ಲಿ-

ನಾನಿಂತಹ ಅನುಭವವನು ಪಡೆದಿದ್ದೆ
ನನ್ನಾ ಮಲೆನಾಡಿನ ಕಾಡಿನ ಮಧ್ಯೆ :
ಆಲಿಸು ಅದೆ ಝೇಂಕಾರ !
ನಾದ ಬ್ರಹ್ಮದ ವೀಣೆಯು ಮಿಡಿದಂದದ ಓಂಕಾರ !

ಆ ಅನುಭವವಾಯಿತ್ತಂದು,
ಅಲ್ಲಿ.
ಬಯಲಿನ ಸೀಮೆಯೊಳದನಿಂದು
ಇಲ್ಲಿ,
ಈ ತಂತಿಯು ಕಂಬದ ಬುಡದಲಿ ನಿಂತು
ಪುನರಾಸ್ವಾದಿಸುತಿಹೆನಿಂತು,
ಕಲ್ಪನೆ ರೆಕ್ಕೆಯ ಬಿಚ್ಚಿ
ಕಣ್ಮುಚ್ಚಿ,
ಕರಗಿದ ನವರತ್ನಾಗ್ನಿಯ ಹೋಲಿ
ಪ್ರವಹಿಸುವಾತ್ಮದ ರಸ ಭಾವಾನಂದದಿ ತೇಲಿ !

ಕಣ್ಣನು ತೆರೆ, ಸುತ್ತಲು ನೋಡು :
ಈಗೆಂತಿದೆ ಧರೆ ? ರಸಸುಖ ಘನಿತಂತಿಹ ಬೀಡು !
ಕೈಮುಗಿ ಈ ತಂತಿಯು ಕಂಬಕ್ಕೆ ;
ವಂದಿಸಿ ನಡೆ ಮುಂದಕ್ಕೆ !

---

## ಕವಿಯ ಹೃದಯವೊಂದು ವೀಣೆ

ಕವಿಯ ಹೃದಯವೊಂದು ವೀಣೆ ;
ಲೋಕವದನು ಮಿಡಿವುದು.
ವ್ಯಕ್ತಿತನವೆ ಕವಿಗೆ ಇಲ್ಲ ;
ಅವನು ಇಲ್ಲ, ಅಥವ ಎಲ್ಲ :
ಎಂತೊ ನಾಡಿನೊಡಲ ನಾಡಿ
ಎಂತುಟಾಸೆಯಿಹುದೊ ನೋಡಿ,
ಎಂತೊ ಜನದ ಮೂಕವಾಣಿ,
ಅಂತೆ ತಂತಿ ನುಡಿವುದು !

# ರೈಲ್ ಗಾಡಿಯು ಕಿಟಕಿ

ಗರಿಗರಿಯಾಗಿದ್ದಾ 'ಗಾಳಿಯ ಮರ' ಗಳ ಹಿಂದೆ
ಹೊಮ್ಮಿತ್ತು ತಣ್ಣಗೆ ಹೊಂಬಣ್ಣದ ಪ್ರಾತಃಸಂಧ್ಯೆ.
ಚಿನ್ನದ ನಗೆನೆಳಗನೆ ಚಿಮುಕಿಸುವಾಕಾಶ ಪಟಕ್ಕೆ
ಬೀಳುತ್ತೇಳುತ ನೆಟ್ಟಗೆ ಸೊಟ್ಟಗೆ ಎದುರಾಗಿ
ದೀರ್ಘದಿಗಂತದ ಫಣಿಸಮ ರೇಖೆ
ಹರಿಹರಿಹರಿಯಿತು ತೆರೆತೆರೆ ತೆರೆವೋಗಿ.
ಸುತ್ತಮುತ್ತಲಿರೆ ಬತ್ತದ ಪೈರಿನ ಹಳದಿ ಬಿತ್ತರದ ಬೈಲು,
ಸಾಗಿರಲಲ್ಲಲ್ಲಿಯೆ ಗದ್ದೆಯ ಕೊಯ್ಲು,
ಸಾಗಿತು ಬಹುಜವದಲಿ ಕಬ್ಬಿಣಸದ್ದಿನ ರೈಲು.

ಕಾರ್ತಿಕಮಾಸದ ಫಲಿತವ್ರೀಹಿಯು ವಿಸ್ತೀರ್ಣದ ಮಧ್ಯೆ
ಹಸುರಾಗೆಸೆದುದು ಆಳೆತ್ತರ ಬೆಳದಿಹ ಕಬ್ಬಿನ ಗದ್ದೆ;....
ಲಂಬಗ್ರೀವದ ಬಕದ ಕುತಂತ್ರಧ್ಯಾನದ ನಿದ್ದೆ !....
ಹುಚ್ಚೆಳ್ಳಿನ ಹೊಲ ಕಣ್ಣಿಗೆ ಹೂ ಹೊನ್ನನೆ ಮೆತ್ತಿ
ಹಿಂದೋಡುತ್ತಿದೆ ನೋಡದೊ ಬೋರೆಯ ಹತ್ತಿ....
ಆಃ ಕಣ್ಮರೆಯಾಯಿತು ! ಕಾಣದೊ ಗುಡ್ಡದ ನೆತ್ತಿ !....

ಅಃ ! ಮತ್ತೇನಿದು ಗಡಿಬಿಡಿ ಸದ್ದು ?
ಕಲ್ಲುಕಬ್ಬಿಣದ ಕರ್ಕಶತರ ಸ್ಪರ್ಧೆಯು ಸದ್ದು !
ಆ ಕಡೆ ಕಲ್ಲು !
ಈ ಕಡೆ ಕಲ್ಲು !
ನೋಟವೆ ಕಣ್ಣಿಗೆ ಗರಗಸಹಲ್ಲು !
ಓಹೋ ತಿಳಿಯಿತು: ಪೂರೈಸಿತು ಬೈಲು ;
ಕಂದಕದಾರಿಯೊಳೋಡುತಲಿದೆ ಸಿಳ್ಳಿಯನೂದುತ ರೈಲು !
ಕಣ್ಮುಚ್ಚದೆ ನೆರೆ ನೋಡೆ
ಭರದಲಿ
ಗಾಡಿಯ ಕಿಟಕಿಯ ಕೀಸುವ ತೆರದಲಿ
ಧಾವಿಸುತಿಹುದಿಕ್ಕಡೆ ಕಗ್ಗಲ್ಲಿನ ಗೋಡೆ !....

ನೋಡದೊ ಮತ್ತೆ,
ನಗುತಿದೆ ಹೃದಯಂಗಮ ದೃಶ್ಯವು ಕಂಗೊಳಿಸುತ್ತೆ :
ಕನ್ನಡಿಯೊಲು ಮಿರುಗುತ್ತಿದೆ ಆ ಕೆರೆ
ಚಿನ್ನದ ಗೆರೆ ಪ್ರತಿಬಿಂಬಿಸಿರೆ !....
ಆ ಮರಗಳ ಮರೆಯಲಿ ನೋಡಲ್ಲಿ
ಹದುಗಿದೆ ಕೈಹೆಂಚಿನ ಮನೆಗಳ ಬಡಹಳ್ಳಿ....
ಹಳದಿ ಗದ್ದೆಗಳ ನಡುನಡು ನೋಡು :
ರೈತರ ಗೆಯ್ಮೆಯ ನೆಲ್ಬಣಬೆಯ ಗೂಡು !....
ಕಡುಹಸುರೆಸಳಿನ ನೀರುಳ್ಳಿಯ ಹೊಲ,
ಬಿತ್ತರದೆಲೆಗಳ ಹೊಗೆಸೊಪ್ಪಿನ ಹೊಲ,
ಕಿರುಬಿಳಿ ಹೂವಿನ ಕೊತ್ತುಂಬರಿ ಹೊಲ,
ಹೊನ್ನಿನ ಹೊನಲಿನ ಹುಚ್ಚೆಳ್ಳಿನ ಹೊಲ,
ಕನ್ನಡ ನಾಡಿನ ಸಂಪತ್ತಿನ ನೆಲ........
(ರೈತನ ಬಡತನ ಮಾತ್ರ ಸುನಿಶ್ಚಲ)........

ರೈಲಿನ ಕಿಟಕಿಗೆ ಕಣ್ಮುಚ್ಚಿ,
ರಷ್ಯಾದೇಶದ ವಿಪ್ಲವ ಚರಿತೆಯ ಹೊತ್ತಗೆಯನು ಬಿಚ್ಚಿ
ಓದುತ ಕುಳಿತೆನು ಸಂಕಟವತಿ ಹೆಚ್ಚಿ !........
'ಕಲ್ಪನೆ' ಯಲಿ ರಕ್ತವ ಕಾರುತ್ತಿರೆ ರೈತನ ಪ್ರಾಣ
ಕೆಮ್ಮನೆ ಧಿಮ್ಮನೆ ಸಾಗಿತು ಕಾಲಾಯಸ ಯಾನ !
ಯಾಂತ್ರಿಕ ನವನಾಗರಿಕತೆಯುಪಮಾನ !

# ಕುವೆಂಪು ಅವರ ಕೃತಿಗಳು

---

ಕೊಳಲು

ನವಿಲು

ಕಿಂದರಿಜೋಗಿ ಮತ್ತು ಇತರ ಕಥನ ಕವನಗಳು

ಪಾಂಚಜನ್ಯ

ಚಿತ್ರಾಂಗದಾ

ಸಂನ್ಯಾಸಿ ಮತ್ತು ಇತರ ಕಥೆಗಳು

ಕಾನೂರು ಸುಬ್ಬಮ್ಮ ಹೆಗ್ಗಡಿತಿ

ನನ್ನ ದೇವರು ಮತ್ತು ಇತರ ಕಥೆಗಳು

ಮಲೆನಾಡಿನ ಚಿತ್ರಗಳು

ಯಮನಸೋಲು ಮತ್ತು ಇತರ ನಾಟಕಗಳು

ಮೂರು ನಾಟಕಗಳು

ಶೂದ್ರತಪಸ್ವಿ

ಬಿರುಗಾಳಿ

ರಕ್ತಾಕ್ಷಿ

ಸಾಹಿತ್ಯಪ್ರಚಾರ ಮತ್ತು ಇತರ ಭಾಷಣಗಳು

ನಿರಂಕುಶಮತಿಗಳಾಗಿ (ಭಾಷಣಗಳು)

ಶ್ರೀರಾಮಕೃಷ್ಣ ಪರಮಹಂಸ

ಸ್ವಾಮಿ ವಿವೇಕಾನಂದ